# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೧೫ (ಫಾಲ್ಗುಣ ೭, ಶಕ ವರ್ಷ ೧೯೩೬)<br>Bengaluru, Thursday, February 26, 2015 (Phalguna 7, Shaka Varsha 1936) | ಸಂಚಿಕೆ ೯<br>Issue 9 |
|---|---|---|

## ಭಾಗ ೩
## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕಂಇ 02 ಮುಆಬಿ 2015, ಬೆಂಗಳೂರು, ದಿನಾಂಕ: 17ನೇ ಜನವರಿ, 2015**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23ರಲ್ಲಿ ನೀಡಿರುವ ಪ್ರದತ್ತವಾದ ಅಧಿಕಾರ ಚಲಾಯಿಸಿ, ಬೆಂಗಳೂರು ನಗರ ಜಿಲ್ಲೆ, ದಕ್ಷಿಣ ತಾಲ್ಲೂಕು, ಬಿಳೇಕಹಳ್ಳಿ ಗ್ರಾಮದ ಶ್ರೀ ಹನುಮಂತ ದೇವರ ದೇವಾಲಯವನ್ನು ಮುಜರಾಯಿ ಇಲಾಖಾ ವ್ಯಾಪ್ತಿಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 271

SC. 25

**ಸಿ.ಟಿ. ಜಯರಾಮೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

### ಪೊಲೀಸ್ ಕಮೀಷನರ್‌ರವರ ಕಛೇರಿ
### ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

**ಅಧಿಸೂಚನೆ**

**ಸಂಖ್ಯೆ : 01/ಅಸೂ/ಡಿಸಿಪಿ ಸಂ(ಪ)/2015, ಬೆಂಗಳೂರು, ದಿನಾಂಕ: 30ನೇ ಜನವರಿ, 2015**

ಬೆಂಗಳೂರು ನಗರ ಬ್ಯಾಟರಾಯನಪುರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿಯಲ್ಲಿ ಕರ್ನಾಟಕ ವಿದ್ಯುತ್ ಕಾರ್ಖಾನೆಯ ಬಳಿ ಇರುವ ವೃಷಭಾವತಿ ಕಾಲುವೆಗೆ ನಿರ್ಮಿಸಿರುವ ಸೇತುವೆಯು ಶಿಥಿಲಾವಸ್ಥೆಯಲ್ಲಿದ್ದು, ಈ ಸೇತುವೆಯನ್ನು ಕೆಡವಿ ಹೊಸದಾಗಿ ಸೇತುವೆ ನಿರ್ಮಾಣ ಮಾಡುವ ಕಾಮಗಾರಿಯನ್ನು ಬೆಂಗಳೂರು ಮಹಾನಗರ ಪಾಲಿಕೆಯವರು ತುರ್ತಾಗಿ ಕೈಗೊಳ್ಳುತ್ತಿದ್ದಾರೆ. ಈ ಕಾಮಗಾರಿ ಕೆಲಸವು ಪೂರ್ಣಗೊಳ್ಳಲು ಸುಮಾರು 6 ತಿಂಗಳ ಕಾಲಾವಧಿ ಹಿಡಿಯುವುದರಿಂದ ಮೈಸೂರು ರಸ್ತೆಯ ಕಿಂಕೋ ಜಂಕ್ಷನ್ ಕಡೆಯಿಂದ ಸಿರ್ಸಿ ವೃತ್ತದ ಕಡೆಗೆ ಬರುವ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ಬರುವ ಎಲ್ಲಾ ತರಹದ ವಾಹನ ಸಂಚಾರವನ್ನು ಹಾಗೂ ವಿಜಯನಗರದಿಂದ ಮೈಸೂರು ರಸ್ತೆ ಕಡೆಗೆ ಬರುವ ಅಂದರೆ ಉತ್ತರದಿಂದ ದಕ್ಷಿಣದ ಕಡೆಗೆ ಬರುವ ಎಲ್ಲಾ ತರಹದ ವಾಹನ ಸಂಚಾರವನ್ನು **ಹೊಸದಾಗಿ ನಿರ್ಮಿಸಿರುವ ದೀಪಾಂಜಲಿನಗರ ಸೇತುವೆಯಿಂದ ಕಿಂಕೋ ಜಂಕ್ಷನ್‌ವರೆಗೆ** ನಿರ್ಬಂಧಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಸಲುವಾಗಿ ಈ ಸಂಚಾರವನ್ನು ಪರ್ಯಾಯ ರಸ್ತೆ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅಗತ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಎನ್. ರೆಡ್ಡಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಸುಗಮ ಸಂಚಾರದ ದೃಷ್ಟಿಯಿಂದ ಈ ಕೆಳಕಂಡಂತೆ ಸಂಚಾರ ನಿರ್ಬಂಧ ಹಾಗೂ ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸಿ ಆದೇಶಿಸಿರುತ್ತೇನೆ.

1. **ಮೈಸೂರು ಮುಖ್ಯ ರಸ್ತೆ :** ಈ ರಸ್ತೆಯಲ್ಲಿ ಮೈಸೂರು ರಸ್ತೆ ಕಿಂಕೋ ಜಂಕ್ಷನ್‌ನಿಂದ ಗಾಳಿ ಆಂಜನೇಯ ದೇವಸ್ಥಾನದವರೆಗೆ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ಸಂಚರಿಸುವ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.

**ಪರ್ಯಾಯ ವ್ಯವಸ್ಥೆ :** ಮೈಸೂರು ಕಡೆಯಿಂದ ಸಿರ್ಸಿ ವೃತ್ತದ ಕಡೆಗೆ ಬರುವ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ಬರುವ ವಾಹನಗಳು ಕಿಂಕೋ ಜಂಕ್ಷನ್ ಬಳಿ ಕಡ್ಡಾಯವಾಗಿ ಎಡ ತಿರುವು ಪಡೆದು ಮುಂದೆ ಸಾಗಿ ದೀಪಾಂಜಲಿ ನಗರದ ಬಳಿ ಬಲ ತಿರುವು ಪಡೆದು ಹೊಸದಾಗಿ ನಿರ್ಮಿಸಿರುವ ಸೇತುವೆಯ ಮೇಲೆ ಸಂಚರಿಸಿ ಬಾಪೂಜಿನಗರ ಜಂಕ್ಷನ್ ಬಳಿ ಮೈಸೂರು ರಸ್ತೆಯನ್ನು ಸೇರಿ ಮುಂದುವರಿಯಲು ಅನುವು ಮಾಡಿಕೊಡಲಾಗಿದೆ.

2. ವೆಸ್ಟ್ ಆಫ್ ಕಾರ್ಡ್ ರಸ್ತೆಯ ದೀಪಾಂಜಲಿ ನಗರದ ಹೊಸ ಸೇತುವೆಯಿಂದ ಕಿಂಕೋ ಜಂಕ್ಷನ್‌ವರೆಗೆ (ಉತ್ತರದಿಂದ ದಕ್ಷಿಣದ ಕಡೆಗೆ) ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.

**ಪರ್ಯಾಯ ವ್ಯವಸ್ಥೆ :** ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿ ವಿಜಯನಗರದ ಕಡೆಯಿಂದ ಮೈಸೂರು ರಸ್ತೆಯ ಕಡೆಗೆ ಅಂದರೆ ಉತ್ತರದಿಂದ ದಕ್ಷಿಣದ ಕಡೆಗೆ ಸಂಚರಿಸುವ ವಾಹನಗಳು ಕಡ್ಡಾಯವಾಗಿ ದೀಪಾಂಜಲಿ ನಗರದ ಬಳಿ ಹೊಸದಾಗಿ ನಿರ್ಮಿಸಿರುವ ಸೇತುವೆಯ ಮೇಲೆ ಎಡ ತಿರುವು ಪಡೆದು ಸಂಚರಿಸಿ ಬಾಪೂಜಿನಗರ ಜಂಕ್ಷನ್ ಬಳಿ ಮೈಸೂರು ರಸ್ತೆಯನ್ನು ಸೇರಿ ಸಂಚರಿಸಬಹುದಾಗಿದೆ, ಅಲ್ಲದೆ, ಹೊಸಕೆರೆಹಳ್ಳಿ, ಬ್ಯಾಟರಾಯನಪುರ, ಬನಶಂಕರಿ ಕಡೆಗೆ ಸಾಗುವ ವಾಹನಗಳು ಮೈಸೂರು ರಸ್ತೆ ಕೆ.ಎಸ್.ಆರ್.ಟಿ.ಸಿ. ಜಂಕ್ಷನ್ ಬಳಿ "ಯು" ತಿರುವು ಪಡೆದು ಅವಶ್ಯಕ ಮಾರ್ಗಗಳಲ್ಲಿ ಮುಂದುವರಿಸಲು ಅನುವು ಮಾಡಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 30-01-2015ರಿಂದ 6 ತಿಂಗಳ ಕಾಲ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 30-01-2015ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎಂ.ಎನ್. ರೆಡ್ಡಿ,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ

**PR 272**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಪಂಪಮಹಾ ಕವಿ ರಸ್ತೆ, ಬೆಂಗಳೂರು-18

**ವಿಷಯ :** ಸ್ಥಗಿತಗೊಂಡಿರುವ ದೇವನಹಳ್ಳಿ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72 ಹಾಗೂ 73 ರಂತೆ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರದ ಸಂಖ್ಯೆ : ಡಿಆರ್‌ಬಿ/ಆರ್/ಸಮಾಪನೆ/1/2014-15, ದಿನಾಂಕ : 19-09-2014.

2. ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಸಮನ್ವಯ ಸಮಿತಿ ಸಭೆಯ ದಿನಾಂಕ : 15-09-2014.

**ಪ್ರಸ್ತಾವನೆ :**

ದೇವನಹಳ್ಳಿ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘವು ಸ್ಥಗಿತಗೊಂಡಿರುವುದಾಗಿ ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರರವರು ಉಲ್ಲೇಖ (1)ರಂತೆ ವರದಿ ಸಲ್ಲಿಸಿ, ಸದರಿ ಸಂಘವನ್ನು ಸಮಾಪನೆಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಸಂಘವು ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿಯ ಆದೇಶ ಸಂಖ್ಯೆ : ಡಿಆರ್‌ಬಿ/ಆರ್/1470/ನೋಂದಣಿ/97-98, ದಿನಾಂಕ : 25-09-1997ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟದ್ದಾಗಿದ್ದು ಸಂಘವನ್ನು ಸಮಾಪನೆಗೊಳಿಸುವ ಅಧಿಕಾರವು ಸರ್ಕಾರದ ಅಧಿಕಾರ ಪ್ರತ್ಯಾಯೋಜನೆಯಂತೆ ಈ ಕಛೇರಿಗೆ ದತ್ತವಾಗಿರುತ್ತದೆ. ಈ ಬಗ್ಗೆ ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಸಂಘವು ಸ್ಥಾಪನೆಯಾದ ಧ್ಯೇಯೋದ್ದೇಶಗಳ ರೀತ್ಯಾ ಕಾರ್ಯನಿರ್ವಹಿಸದೆ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿ ಉಲ್ಲೇಖ (2) ರೀತ್ಯಾ ನಡೆದಿರುವ ಜಿಲ್ಲಾ ಸಮನ್ವಯ ಸಮಿತಿ ಸಭೆಯಲ್ಲಿ ಸಹ ಚರ್ಚಿಸಿ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ತೀರ್ಮಾನ ಕೈಗೊಂಡಿರುತ್ತಾರೆ.

ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಹಾಗೂ ನಿಯಮಗಳು 1960 ರಡಿಯಲ್ಲಿ ಕಾರ್ಯನಿರ್ವಹಿಸಲು ಹಾಗೂ ಶಾಸನಬದ್ಧವಾಗಿ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳನ್ನು ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ ಸಂಘವು ಕಾಲಕಾಲಕ್ಕೆ ಮಾಡಿಸಬೇಕಾದ ಲೆಕ್ಕ ಪರಿಶೋಧನೆ ಮಾಡಿಸುವಲ್ಲಿ, ವಾರ್ಷಿಕ ಮಹಾಸಭೆ ನಡೆಸುವಲ್ಲಿ, ಸಂಘದ ಉಪನಿಯಮಗಳ ಪ್ರಕಾರ ಆಡಳಿತ ಮಂಡಳಿ ಸಭೆ ನಡೆಸುವಲ್ಲಿ ಹಾಗೂ ತಿದ್ದುಪಡಿಯಾದ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳ ರೀತ್ಯಾ ಸಂಘದ ಉಪ ನಿಯಮಗಳಿಗೆ ಸಮಗ್ರ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯದೆ ಇರುವುದು, ಸಂಬಂಧಪಟ್ಟ ನಿಬಂಧಕರಿಗೆ ಕಲಂ 29(ಜಿ) ರೀತ್ಯಾ ಕಾಲಕಾಲಕ್ಕೆ ಸಲ್ಲಿಸಬೇಕಾಗಿರುವ ಸಭಾ ನಡವಳಿ, ಜಮಾ ಖರ್ಚು ತಃಖ್ತೆಯನ್ನು ಸಲ್ಲಿಸುವಲ್ಲಿ ವಿಫಲವಾಗಿದ್ದು, ಸಂಘವು ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳ ರೀತ್ಯಾ ಕಾರ್ಯನಿರ್ವಹಿಸುವಲ್ಲಿ ಸಂಪೂರ್ಣವಾಗಿ ವಿಫಲವಾಗಿ ನಿಷ್ಕ್ರಿಯೆಗೊಂಡಿರುವುದರಿಂದ ಈ ಸಂಘದಿಂದ ಸದಸ್ಯರಿಗಾಗಲಿ ಅಥವಾ ಸಾರ್ವಜನಿಕರಿಗಾಗಲಿ ಯಾವುದೇ ರೀತಿಯಲ್ಲಿ ಪ್ರಯೋಜನ ಆಗದೆ ಇರುವುದರಿಂದ ಹಾಗೂ ಸಂಘದ ಆಡಳಿತ ಮಂಡಳಿಯವರಾಗಲಿ ಅಥವಾ ಸದಸ್ಯರಾಗಲಿ ಸಹಕಾರ ಸಂಘಗಳ ಕಾಯ್ದೆ, ನಿಯಮಗಳು ಮತ್ತು ಸಂಘದ ಉಪ ನಿಯಮಗಳ ರೀತ್ಯಾ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ತೋರಿಸದೆ ಇರುವ ಕಾರಣಗಳಿಂದಾಗಿ ಸಂಘವನ್ನು ಸಮಾಪನೆಗೊಳಿಸುವಂತೆ ಉಲ್ಲೇಖ (1)ರಂತೆ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಶಿಫಾರಸ್ಸು ಮಾಡಿರುವ

ಹಿನ್ನೆಲೆಯಲ್ಲಿ ಉಪ ನಿಬಂಧಕರ ವರದಿ ಹಾಗೂ ಶಿಫಾರಸ್ಸು ಮತ್ತು ಸಮನ್ವಯ ಸಮಿತಿ ಸಭೆಯ ತೀರ್ಮಾನದಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ. : ಜೆಆರ್‌ಬಿ:ಸಮಾಪನೆ : 105 : 2014–15, ದಿನಾಂಕ : –09–2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2010, ದಿನಾಂಕ : 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಬಿ.ಸಿ. ಸತೀಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ದೇವನಹಳ್ಳಿ ತಾಲ್ಲೂಕು ಕುರಿ ಸಾಕಾಣಿಕೆದಾರರ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)(ಸಿ) ರನ್ವಯ ಸಮಾಪನೆಗೊಳಿಸಿ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ದೇವನಹಳ್ಳಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಯಾಗಿ ನೇಮಕಗೊಂಡ ಸಹಕಾರ ಅಭಿವೃದ್ಧಿ ಅಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ನಿಯಮಾನುಸಾರ ಕೂಡಲೇ ಪ್ರಭಾರ ಪಡೆದಯಕೊಳ್ಳತಕ್ಕದ್ದು. ಹಾಗೂ ಇತ್ತೀಚಿನ ಲೆಕ್ಕಪರಿಶೋಧನಾ ವರದಿ ಪಡೆದು ನಿಬಂಧಕರ ಸುತ್ತೋಲೆಗೆ ಅನುಗುಣವಾಗಿ ಸಂಘದ ಆಸ್ತಿ ಜವಾಬ್ದಾರಿಯ ಅಧ್ಯತಾಪಟ್ಟಿ ತಯಾರಿಸಿ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇ ಮಾಡಿ ಸಂಘದ ನೋಂದಣಿ ಪದ್ಧತಿಗೆ ನಿಯಮಾನುಸಾರ ಸೂಕ್ತ ಕ್ರಮ ಕೈಗೊಂಡು ವರದಿ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 09–2014 ರಂದು ಹೊರಡಿಸಲಾಗಿದೆ.

**P.R. 868**

**SC-10**

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**ಕ್ರಸಂ : ಎಸ್1/ಎಫ್‌ಓಸಿ/ವಿವ–10/2007–08, ಕಾರವಾರ, ದಿನಾಂಕ : 14–11–2014.**

**ಉಪಸ್ಥಿತರು :** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು :** ವಲಯ ಅರಣ್ಯಾಧಿಕಾರಿ,
ರಾಮನಗುಳಿ
(ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು :** –

**ಪ್ರಸ್ತಾವನೆ :**

1. ವಲಯ ಅರಣ್ಯಾಧಿಕಾರಿ, ರಾಮನಗುಳಿ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 05–12–2007 ರಂದು ವರದಿ ಸಲ್ಲಿಸುತ್ತಾ ದಿನಾಂಕ: 05–12–2007 ರಂದು ಅಜಮಾಸು ಬೆಳಿಗ್ಗೆ 5.30 ಘಂಟೆ ಸುಮಾರಿಗೆ ನಮ್ಮ ಸಿಬ್ಬಂದಿಗಳಾದ ಶ್ರೀ. ಶ್ರೀನಿವಾಸ ಉಮೇಶ ನಾಯ್ಕ, ಅರಣ್ಯ ರಕ್ಷಕ ಹಳವಳ್ಳಿ, ಶ್ರೀ. ವೆಂಕಟೇಶ ಪುಟ್ಟಾ ಗೌಡ, ಅರಣ್ಯರಕ್ಷಕ, ಶೇವಕಾರ ಇವರು ಸರ್ಕಾರಿ ವಾಹನ ಸಂಖ್ಯೆ: ಕೆಎ–01/ಜಿ–1288ನೇದರಲ್ಲಿ ಕೊಡ್ಲಗದ್ದಾ ಬ್ಲಾಕ್ ನಂ. XXIV–19ನೇದರ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿಯ ಸಮೀಪದಲ್ಲಿ ಹಾದು ಹೋದ ರಾಷ್ಟ್ರೀಯ ಹೆದ್ದಾರಿ 63ರಲ್ಲಿ ಗಸ್ತು ತಿರುಗುವಾಗ ಒಂದು ವಾಹನವು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು, ಸಿಬ್ಬಂದಿಗಳು ತಮ್ಮ ವಾಹನದಿಂದ ಕೆಳಗಿಳಿದು ವಾಹನದ ಹತ್ತಿರ ಹೋಗುತ್ತಿದ್ದಂತೆ ಸದರ ವಾಹನದಲ್ಲಿದ್ದ 2ಜನ ವ್ಯಕ್ತಿಗಳು ವಾಹನದ ಎರಡೂ ಬದಿಯ ಕದವನ್ನು ತಕ್ಷಣ ತೆಗೆದು ಜಿಗಿದು ಓಡಿ ಹೋಗಿರುತ್ತಾರೆ. ನಂತರ ಸಿಬ್ಬಂದಿಗಳು ಹೋಗಿ ವಾಹನವನ್ನು ನೋಡಿದಾಗ ತಾಡಪತ್ರಿ ಕಟ್ಟಿದ್ದು ಮೇಲೆ ಹತ್ತಿ ನೋಡಿದಲ್ಲಿ ಹಲವಾರು ತುಂಡುಗಳಿರುವದನ್ನು ಕಂಡು ಅದನ್ನು ಪರಿಶೀಲಿಸಲಾಗಿ ಸಾಗವಾನಿ ಜಾತಿಯದು ಎಂದು ಖಾತ್ರಿಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನ ಚಲಿಸಿದ ಗುರ್ತುನ್ನು ಹಿಂಬಾಲಿಸಿದಾಗ ಅಲ್ಲಿಯೇ ಹತ್ತಿರದಲ್ಲಿ ಸಾಗವಾನಿ ಜಾತಿಯ 15 ಮರಗಳು ಕಡಿದ ಬಗ್ಗೆ ಬುಡಚಿಗಳು ಕಂಡು ಬಂದಂತೆ, ಸಿಬ್ಬಂದಿಗಳು ನಮ್ಮ ಸಮಕ್ಷಮ ಬುಡಚಿಗಳ ಮೇಲೆ ಹಾಗೂ ವಾಹನದಲ್ಲಿ ಹೇರಲಾದ ತುಂಡುಗಳ ಮೇಲೆ ಇಲಾಖಾ ಟಿ. ನಿಶಾನೆ ಹೊಡೆದು, ಇಲಾಖಾಪರ ಜಪ್ತ ಮಾಡಿಕೊಳ್ಳಲಾಯಿತು. ಸದರಿ ವಾಹನದಲ್ಲಿ ಹೇರಲಾದ ತುಂಡುಗಳ ಮತ್ತು ಬುಡಚಿಗಳ ಅಳತೆ 44=3.941 ಘ.ಮೀ ಆಗಿದ್ದು ಸದರಿ ವೇಳೆಯಲ್ಲಿ ಗುನ್ನೆ ನಡೆದ ಸ್ಥಳದಲ್ಲಿ ಸಾರ್ವಜನಿಕರು ಇರದೇ ಇರುವ ಕಾರಣ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿಸಿ ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆದಿದ್ದು ಇರುತ್ತದೆ. ಇದು ಅನಧಿಕೃತ ಮ್ಹಾಲು ಎಂದು ಖಚಿತಪಡಿಸಿಕೊಂಡು ಶಾಖಾ ವನಪಾಲಕ, ರಾಮನಗುಳಿ ಇವರು ತಮ್ಮ ಪ್ರಥಮ ಮಾಹಿತಿ ವರದಿ ಸಂಖ್ಯೆ: 08/2007–08, ದಿನಾಂಕ: 05–12–2007 ರಂತೆ ಗುನ್ನೆ ದಾಖಲಿಸಿ, ಆರೋಪಿ ನಾಪತ್ತೆಯಾಗಿರುವದರಿಂದ ಜಪ್ತಪಡಿಸಲಾದ ಸಾಗ ನಗಗಳು 44=3.941 ಘ.ಮೀ. ಮ್ಹಾಲನ್ನು ಹಾಗೂ ಗುನ್ನೆಗೆ ಬಳಸಿದ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (e),50, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ144 ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮುದ್ಧೆಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು

ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 07-12-2007 ರಂದು ಸದರಿ ಜಪ್ತುಪಡಿಸಿದ ವಾಹನ ಮತ್ತು ಸಾಗ , ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಮಾಲೀಕತ್ವದ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಈ ಪ್ರಾಧಿಕಾರದ ಪತ್ರ ದಿನಾಂಕ: 29-03-2008 ರಂದು ಜಪ್ತ ವಾಹನದ ಮಾಲೀಕತ್ವದ ವಿವರವನ್ನು ನೀಡಲು ಕೋರಲಾಗಿರುತ್ತದೆ. ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 03-04-2008 ರಂದು ವರದಿ ನೀಡಿರುತ್ತಾರೆ. ಸದರಿ ವರದಿಯನ್ನು ಆಧರಿಸಿ ವಾಹನ ಮಾಲೀಕರೆಂದು ತಿಳಿದು ಬಂದಿರುವ ಶ್ರೀ. ಉಮೇಶ ಬುದಿಯಾ ನಾಯ್ಕ, ಸಾ: ಸುಂಕಸಾಳ, ಡೋಂಗ್ರಿ, ತಾಲ್ಲೂಕು: ಅಂಕೋಲಾ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 02-05-2008 ರಂದು ನೋಟೀಸು ಜಾರಿಗೊಳಿಸಿ 07 ದಿವಸದೊಳಗಾಗಿ ಅವರ ತರ್ಫೆ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಉತ್ತರ ನೀಡಲು ತಿಳಿಸಲಾಗಿತ್ತು. ಆದರೆ, ಶ್ರೀ. ಉಮೇಶ ಬುದಿಯಾ ನಾಯ್ಕ, ಸಾ: ಸುಂಕಸಾಳ, ಡೋಂಗ್ರಿ ಇವರು ದಿನಾಂಕ: 12-05-2008 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ನೀಡಿ ಈ ಗುನ್ಹೆಯಲ್ಲಿ ಬಳಸಿದ ಟಾಟಾ ಮಿನಿಲಾರಿ ಸಂಖ್ಯೆ: ಕೆಎ-30/7451 ವಾಹನವು ತನ್ನ ಮಾಲೀಕತ್ವದ್ದು ಇರುವದಿಲ್ಲವಾಗಿ, ತನ್ನ ಭಾರಿ ವಾಹನವು ಕೆಎ-30/7451 ಆಗಿದ್ದು ಅದು ತನ್ನ ಬಳಿಯಲ್ಲಿದ್ದು, ಜಪ್ತ ವಾಹನ ಟಾಟಾ ಮಿನಿ ಲಾರಿ ಸಂಖ್ಯೆ: ಕೆಎ-30/7451 ತನ್ನ ಮಾಲೀಕತ್ವಕ್ಕೆ ಸಂಬಂಧಪಟ್ಟಿದ್ದು ಇರುವದಿಲ್ಲ. ಆದ್ದರಿಂದ ಅದನ್ನು ಮುಟ್ಟುಗೋಲು ಹಾಕಿಕೊಳ್ಳಲು ನನ್ನ ಉತ್ತರದ ಅವಶ್ಯಕತೆ ಇರುವದಿಲ್ಲವಾಗಿ ತಿಳಿಸಿರುತ್ತಾರೆ.

3. ಸದರಿ ಗುನ್ಹೆಯಲ್ಲಿ ಜಪ್ತಪಡಿಸಲಾದ ಮಿನಿಲಾರಿ ಸಂಖ್ಯೆ: ಕೆಎ-30/7451 ವಾಹನದ ಮಾಲೀಕತ್ವದ ಕುರಿತು ಸಾರ್ವಜನಿಕರಿಗೆ ತಿಳುವಳಿಕೆ ಬಗ್ಗೆ ಈ ಪ್ರಾಧಿಕಾರದಿಂದ ದಿನಾಂಕ: 17-06-2010 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲು ಕೋರಿಕೊಂಡಂತೆ ದಿನಾಂಕ: 26-08-2010 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ್ದು ಇರುತ್ತದೆ. ತರುವಾಯ, ಈ ಪ್ರಾಧಿಕಾರದಿಂದ ದಿನಾಂಕ: 04-08-2014 ರಂದು ಪುನ: ಸಂಬಂಧಪಟ್ಟ ವಾಹನ ಮಾಲೀಕರ ಗಮನಕ್ಕೆ ತರಲು ಕರಾವಳಿ ಮುಂಜಾವು ದಿನಪತ್ರಿಕೆಯಲ್ಲಿ ದಿನಾಂಕ: 06-08-2014 ರಂದು ಪ್ರಚಲಪಡಿಸಿದ್ದು ಇರುತ್ತದೆ. ಆದರೆ, ಈ ವಾಹನದ ಸಂಬಂಧಪಟ್ಟ ಮಾಲೀಕರು/ ಇತರೇ ವಾರಸುದಾರರು ಯಾರೂ ಕೂಡ ಈ ಪ್ರಾಧಿಕಾರಕ್ಕೆ ಅರ್ಜಿ ವಗೈರೆ ಸಲ್ಲಿಸಿದ್ದು ಇರುವದಿಲ್ಲ.

4. ಈ ಪ್ರಕರಣದ ವಿಚಾರಣೆಯನ್ನು ದಿನಾಂಕ: 21-06-2012, 25-07-2012, 28-08-2012, 25-09-2012 ಮತ್ತು 17-10-2014 ರಂದು ಕೈಕೊಳ್ಳಲಾಗಿದೆ.

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಅಥವಾ ಅವರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ. ಆದರೆ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ-1 ರಿಂದ ಪಿಡಬ್ಲ್ಯೂ-2 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ -1 : ಶ್ರೀ. ನೆಹರೂ ಕಾನಕೋ ಪರವಾರ, ಉಪ ವಲಯ ಅರಣ್ಯಾಧಿಕಾರಿ,
ಸೀಬರ್ಡ ಯೋಜನೆ, ಕಾರವಾರ.

ಪಿಡಬ್ಲ್ಯೂ-2 : ಸಂತೋಷ ಮಂಗೇಶ ಪವಾರ್, ಉಪ ವಲಯ ಅರಣ್ಯಾಧಿಕಾರಿ, ಅಂಕೋಲಾ ಶಾಖೆ.

ನಿಶಾನೆ ಪಿ-1 ರಿಂದ ಪಿ-5 ನ್ನು ಹಾಜರುಪಡಿಸಿರುತ್ತಾರೆ.

| | |
|---|---|
| ನಿಶಾನೆ ಪಿ-1: | ಪಂಚನಾಮೆ |
| ನಿಶಾನೆ ಪಿ-2: | ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ-3: | ಸೀಜರ್ ರಿಪೋರ್ಟ |
| ನಿಶಾನೆ ಪಿ-4: | ವಿಚಾರಣಾ ವರದಿ |
| ನಿಶಾನೆ ಪಿ-5: | ವಾಹನದ ಛಾಯಾ ಚಿತ್ರ |

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ಜಾತಿಯ ನಗಗಳು 44=3.941 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ಹೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ಜಾತಿಯ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಮಿನಿಲಾರಿ ವಾಹನ ಸಂಖ್ಯೆ ಕೆಎ-30/7451 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿಡಬ್ಲ್ಯೂ–1** ನಾನು ಮಾರ್ಚ–2007 ರಿಂದ ಮಾರ್ಚ2010 ರವರೆಗೆ ರಾಮನಗುಳಿ ವಲಯದಲ್ಲಿ ರಾಮನಗುಳಿ ಶಾಖಾ ವನಪಾಲಕ ಎಂತಾ ಕೆಲಸ ಮಾಡುತ್ತಿದ್ದೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶಾಖಾ ವನಪಾಲಕ ಹಳವಳ್ಳಿ ಎಂತಾ ಸಂತೋಷ ಪವಾರ್ ಇವರು ಕೆಲಸ ಮಾಡುತ್ತಿದ್ದರು. ದಿನಾಂಕ: 05–12–2007 ರಂದು ಬೆಳಗ್ಗಿನ ಜಾವ ನಾನು ಶಾಖಾ ವನಪಾಲಕ ಹಳವಳ್ಳಿ ಸಂತೋಷ ಪವಾರ್ ಹಾಗೂ ಅರಣ್ಯ ರಕ್ಷಕರಾದ ಶ್ರೀನಿವಾಸ ನಾಯ್ಕ ಮತ್ತು ವೆಂಕಟ್ರಮಣ ಗೌಡ ಇವರು ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಿದ್ದೆವು. ನಾನು ಹೀಗೆ ಗಸ್ತು ತಿರುಗುತ್ತಾ ಬೆಳಗ್ಗಿನ ಜಾವಾ 5 ಗಂಟೆಗೆ ಕೊಡ್ಲಗದ್ದಾ ಬ್ಲಾಕ್–24–19 ರಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಗಸ್ತು ತಿರುಗುತ್ತಿರುವಾಗ, ಒಂದು ಮಿನಿಲಾರಿ ಸಂಖ್ಯೆ: ಕೆಎ–30/7451ನೇದು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು ಬಂದಿತು. ಅದನ್ನು ನೋಡಿ ನಾವು ಕೆಳಗಿಳಿದು ಹೋಗುವಷ್ಟರಲ್ಲಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ ಓಡಿ ಹೋದವರಲ್ಲಿ (1) ಅಮೀರ ಸಾ: ಶಿರಸಿ (2) ನಾರಾಯಣ ಚೌಹಾಣ ದಾವಣಗೆರೆ ಎಂದು ನಮ್ಮ ಸಿಬ್ಬಂದಿಯವರು ಗುರುತಿಸಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ, ವಾಹನಕ್ಕೆ ತಾಡಪತ್ರೆ ಕಟ್ಟಿದ್ದು ಕಂಡು ಬಂದಿತು. ವಾಹನದ ಮೇಲೆಹತ್ತಿ ನೋಡಲಾಗಿ, ಅದರಲ್ಲಿ ಸಾಗವಾನಿ ಜಾತಿಯ ತುಂಡುಗಳು ಇದ್ದು, ಸದರಿ ವಾಹನವು ಚಲಿಸಿದ ಟಾಯರಿನ ಗುರುತನ್ನು ಹಿಂಬಾಲಿಸಿ ಹೋಗಿ ನೋಡಿದಾಗ ಸುಮಾರು 15 ಸಾಗವಾನಿ ಜಾತಿಯ ಮರವನ್ನು ಕಡಿದ ಬಗ್ಗೆ ಬುಡುಚಿಗಳು ಕಂಡು ಬಂದವು. ವಾಹನದ ಮೇಲೆ ಇದ್ದ ತುಂಡುಗಳನ್ನು ಎಣಿಸಲಾಗಿ ಒಟ್ಟೂ 44 ತುಂಡುಗಳಿದ್ದು ಅದರ ಅಳತೆ 3.941 ಘ.ಮೀ. ಆಗಿತ್ತು. ಹಾಗೂ ಆ ತುಂಡುಗಳಿಗೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಸದರಿ 15 ಮರಗಳನ್ನು ಕಡಿದು ತುಂಡುಗಳನ್ನು ತಯಾರಿಸಿದ ಬಗ್ಗೆ ಖಾತ್ರಿಯಾಗಿದ್ದು, ಬುಡುಚಿಗಳಿಗೆ ಹಾಗೂ ತುಂಡುಗಳಿಗೆ ನಂಬರುಗಳನ್ನು ಹಾಕಲಾಯಿತು. ಹಾಗೂ ಸ್ಥಳದಲ್ಲಿ ಈ ಬಗ್ಗೆ ಶಾಖಾ ವನಪಾಲಕ, ಹಳವಳ್ಳಿಯವರು ಪಂಚನಾಮೆಯನ್ನು ಬರೆದಿರುತ್ತಾರೆ. ಸ್ಥಳದಲ್ಲಿ ಅರಣ್ಯ ಪ್ರದೇಶ ಸುತ್ತುವರಿದಿದ್ದು ಯಾವುದೇ ಸಾರ್ವಜನಿಕರ ಸಂಪರ್ಕ ಇರುವದಿಲ್ಲ. ಕಾರಣ ನಮ್ಮ ಜೊತೆ ಇದ್ದ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿ ತೆಗೆದುಕೊಂಡು, ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆದು ಸದರಿ 44 ತುಂಡುಗಳನ್ನು ಹಾಗೂ ವಾಹನವನ್ನು ಜಪ್ತಪಡಿಸಿಕೊಳ್ಳಲಾಯಿತು. ಪಂಚನಾಮೆಯ ನಂತರ ವಾಹನವನ್ನು ಸಾಗವಾನಿ ತುಂಡುಗಳ ಸಮೇತ ವಲಯ ಕಚೇರಿಗೆ ತರಲಾಯಿತು. ಸಾಕ್ಷಿ ಪಂಚನಾಮೆ, ಪ್ರ.ವಾ ವರದಿ, ಜಪ್ತ ವರದಿ, ತನಿಖಾ ವರದಿ, ಹಾಗೂ ವಾಹನದ ಫೋಟೊವನ್ನು ಗುರುತಿಸಿದ್ದು ಅವುಗಳನ್ನು ಕ್ರಮವಾಗಿ ನಿ.ಪಿ–1 ರಿಂದ 5 ಎಂದು ನಿ.ಪಿ–1 ರಿಂದ ನಿ.ಪಿ–3 ರ ಮೇಲೆ ಇರುವ ಸಾಕ್ಷಿ ಸಹಿಯನ್ನು ನಿ.ಪಿ1–ಎ ಯಿಂದ ನಿ.ಪಿ. 3–ಎ ಎಂದು ಗುರುತಿಸಲಾಯಿತು.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲ್ಯೂ–2** ನಾನು 8–8–2005 ರಿಂದ 23–02–2009 ರ ವರೆಗೆ ನಾನು ಹಳವಳ್ಳಿ ಶಾಖಾ ವನಪಾಲಕನಾಗಿ ಕೆಲಸ ಮಾಡುತ್ತಿದ್ದೆ. ನಾನು ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶಾಖಾ ವನಪಾಲಕ ರಾಮನಗುಳಿ ಎಂತಾ ನೆಹರೂ ಕೆ. ಪರವಾರ ಇವರು ಕೆಲಸ ಮಾಡುತ್ತಿದ್ದರು. ದಿನಾಂಕ: 05–12–2007 ರಂದು ಬೆಳಗ್ಗಿನ ಜಾವ ನಾನು ಶಾಖಾ ವನಪಾಲಕ ರಾಮನಗುಳಿ ನೆಹರೂ ಪರವಾರ್ ಹಾಗೂ ಅರಣ್ಯ ರಕ್ಷಕರಾದ ಶ್ರೀನಿವಾಸ ನಾಯ್ಕ ಮತ್ತು ವೆಂಕಟ್ರಮಣ ಗೌಡ ಇವರು ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಿದ್ದೆವು. ನಾನು ಹೀಗೆ ಗಸ್ತು ತಿರುಗುತ್ತಾ ಬೆಳಗ್ಗಿನ ಜಾವಾ 5 ಗಂಟೆಗೆ ಕೊಡ್ಲಗದ್ದಾ ಬ್ಲಾಕ್–24–19 ರಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಗಸ್ತು ತಿರುಗುತ್ತಿರುವಾಗ, ಒಂದು ಮಿನಿಲಾರಿ ಸಂಖ್ಯೆ: ಕೆಎ–30/7451ನೇದು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು ಬಂದಿತು. ಅದನ್ನು ನೋಡಿ ನಾವು ಕೆಳಗಿಳಿದು ಹೋಗುವಷ್ಟರಲ್ಲಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ ಓಡಿ ಹೋದವರಲ್ಲಿ (1) ಅಮೀರ ಸಾ: ಶಿರಸಿ (2) ನಾರಾಯಣ ಚೌಹಾಣ ದಾವಣಗೆರೆ ಎಂದು ನಮ್ಮ ಸಿಬ್ಬಂದಿಯವರು ಗುರುತಿಸಿರುತ್ತಾರೆ. ನಂತರ ನಾವು ವಾಹನ ಪರಿಶೀಲಿಸಿದಾಗ ವಾಹನಕ್ಕೆ ತಾಡಪತ್ರೆ ಕಟ್ಟಿದ್ದು ಕಂಡು ಬಂದಿತು. ಮೇಲೆಹತ್ತಿ ನೋಡಲಾಗಿ, ಅದರಲ್ಲಿ ಸಾಗವಾನಿ ಜಾತಿಯ ತುಂಡುಗಳು ಇದ್ದದ್ದು ಕಂಡು ಬಂದಿತು. ಸದರ ವಾಹನವು ಚಲಿಸಿದ ಟಾಯರಿನ ಗುರುತನ್ನು ಹಿಂಬಾಲಿಸಿ ಹೋಗಿ ನೋಡಿದಾಗ ಸುಮಾರು 15 ಸಾಗವಾನಿ ಜಾತಿಯ ಮರವನ್ನು ಕಡಿದ ಬಗ್ಗೆ ಬುಡುಚಿಗಳು ಕಂಡು ಬಂದವು. ವಾಹನದ ಮೇಲೆ ಇದ್ದ ತುಂಡುಗಳನ್ನು ಎಣಿಸಲಾಗಿ ಒಟ್ಟೂ 44 ತುಂಡುಗಳಿದ್ದು ಅದರ ಅಳತೆ 3.941 ಘ.ಮೀ. ಆಗಿತ್ತು. ಹಾಗೂ ಆ ತುಂಡುಗಳಿಗೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಸದರಿ 15 ಮರಗಳನ್ನು ಕಡಿದು ತುಂಡುಗಳನ್ನು ತಯಾರಿಸಿದ ಬಗ್ಗೆ ಖಾತ್ರಿಯಾಗಿದ್ದು, ಬುಡುಚಿಗಳಿಗೆ ಹಾಗೂ ತುಂಡುಗಳಿಗೆ ನಂಬರುಗಳನ್ನು ಹಾಕಲಾಯಿತು. ಹಾಗೂ ಸ್ಥಳದಲ್ಲಿ ಈ ಬಗ್ಗೆ ನಾನು ಪಂಚನಾಮೆಯನ್ನು ಬರೆದಿರುತ್ತೇನೆ. ಸ್ಥಳದಲ್ಲಿ ಅರಣ್ಯ ಪ್ರದೇಶ ಸುತ್ತುವರಿದಿದ್ದು ಯಾವುದೇ ಸಾರ್ವಜನಿಕರ ಸಂಪರ್ಕ ಇರುವದಿಲ್ಲ. ಕಾರಣ ನಮ್ಮ ಜೊತೆ ಇದ್ದ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿ ತೆಗೆದುಕೊಂಡು, ಪಂಚನಾಮೆಯನ್ನು ಬರೆದು ಸದರಿ 44 ತುಂಡುಗಳನ್ನು ಹಾಗೂ ವಾಹನವನ್ನು ಜಪ್ತಪಡಿಸಿಕೊಳ್ಳಲಾಯಿತು. ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯ ನಂತರ ವಾಹನವನ್ನು ಸಾಗವಾನಿ ತುಂಡುಗಳ ಸಮೇತ ವಲಯ ಕಚೇರಿಗೆ ತರಲಾಯಿತು. ಸಾಕ್ಷಿ ಪಂಚನಾಮೆಯನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಲಾಗಿದ್ದು, ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ವಾಹನದ ಫೊಟೊವನ್ನು ಸಾಕ್ಷಿಯ ಈಗಾಗಲೇ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–5 ಎಂದು ಗುರುತಿಸಲಾಗಿದೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದುದ ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಅಂಶ ನಂ. (ಆ):**

ದಿನಾಂಕ: 05–12–2007 ರಂದು ಅಜಮಾಸು ಬೆಳಿಗ್ಗೆ 5.30 ಘಂಟೆ ಸುಮಾರಿಗೆ ನಮ್ಮ ಸಿಬ್ಬಂದಿಗಳಾದ ಶ್ರೀ. ಶ್ರೀನಿವಾಸ ಉಮೇಶ ನಾಯ್ಕ, ಅರಣ್ಯ ರಕ್ಷಕ ಹಳವಳ್ಳಿ, ಶ್ರೀ. ವೆಂಕಟೇಶ ಪುಟ್ಟಾ ಗೌಡ, ಅರಣ್ಯರಕ್ಷಕ, ಶೇವಕಾರ ಇವರು ಸರ್ಕಾರಿ ವಾಹನ ಸಂಖ್ಯೆ: ಕೆಎ–01/ಜಿ–1288ನೇದರಲ್ಲಿ ಕೊಡ್ಲಗದ್ದಾ ಬ್ಲಾಕ್ ನಂ. XXIV-19ನೇದರ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿಯ ಸಮೀಪದಲ್ಲಿ ಹಾದು ಹೋದ ರಾಷ್ಟ್ರೀಯ ಹೆದ್ದಾರಿ 63ರಲ್ಲಿ ಗಸ್ತು ತಿರುಗುವಾಗ ಒಂದು ವಾಹನವು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು, ಸಿಬ್ಬಂದಿಗಳು ತಮ್ಮ ವಾಹನದಿಂದ ಕೆಳಗಿಳಿದು ವಾಹನದ ಹತ್ತಿರ ಹೋಗುತ್ತಿದ್ದಂತೆ ಸದರಿ ವಾಹನದಲ್ಲಿದ್ದ ವ್ಯಕ್ತಿಗಳು ವಾಹನದ ಎರಡೂ ಬದಿಯ ಕದವನ್ನು ತಕ್ಷಣ ತೆಗೆದು ಜಿಗಿದು ಓಡಿ

ಹೋದರು. ವಾಹನಕ್ಕೆ ತಾಡಪತ್ರಿ ಕಟ್ಟಿದ್ದು ಮೇಲೆ ಹತ್ತಿ ನೋಡಿದಲ್ಲಿ ಹಲವಾರು ತುಂಡುಗಳಿರುವದನ್ನು ಕಂಡು ಅದನ್ನು ಪರಿಶೀಲಿಸಲಾಗಿ ಸಾಗವಾನಿ ಜಾತಿಯದು ಎಂದು ಖಾತ್ರಿಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನ ಚಲಿಸಿದ ಗುರ್ತುನ್ನು ಹಿಂಬಾಲಿಸಿದಾಗ ಅಲ್ಲಿಯೇ ಹತ್ತಿರದಲ್ಲಿ ಸಾಗವಾನಿ ಜಾತಿಯ 15 ಮರಗಳು ಕಡಿದ ಬಗ್ಗೆ ಬುಡಚಿಗಳು ಕಂಡು ಬಂದಂತೆ, ಸಿಬ್ಬಂದಿಗಳು ನಮ್ಮ ಸಮಕ್ಷಮ ಬುಡಚಿಗಳ ಮೇಲೆ ಹಾಗೂ ವಾಹನದಲ್ಲಿ ಹೇರಲಾದ ತುಂಡುಗಳ ಮೇಲೆ ಇಲಾಖಾ ಟಿ. ನಿಶಾನೆ ಹೊಡೆದು, ಇಲಾಖಾಪರ ಜಪ್ತ ಮಾಡಿಕೊಳ್ಳಲಾಯಿತು. ಸದರ ವಾಹನದಲ್ಲಿ ಹೇರಲಾದ ತುಂಡುಗಳ ಮತ್ತು ಬುಡಚಿಗಳ ಅಳತೆ 44=3.941 ಘ.ಮೀ ಆಗಿದ್ದು ಸದರಿ ವೇಳೆಯಲ್ಲಿ ಗುನ್ನೆ ನಡೆದ ಸ್ಥಳದಲ್ಲಿ ಸಾರ್ವಜನಿಕರು ಇರದೇ ಇರುವ ಕಾರಣ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿಸಿ ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆಯಲಾಗಿದೆ. ಮುದ್ದೆಮ್ಹಾಲು ಹಾಗೂ ಗುನ್ನೆಗೆ ಬಳಸಿದ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ವಾಹನವನ್ನು ಜಪ್ತಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಗುನ್ನೆಯಲ್ಲಿ ಬಳಸಿಕೊಂಡಿರುವ ಬಗ್ಗೆ ಅದನ್ನು (ನಿ.ಪಿ– 1 ರಿಂದ ನಿ.ಪಿ–5) ದಾಖಲಾಗಿದೆ. ವಿಚಾರಣೆ ಕಾಲಕ್ಕೆ ಅರ್ಜಿದಾರರು ಅಥವಾ ಅವರ ಪರ ವಕೀಲರು ಹಾಜರಾಗಿದ್ದು ಇರುವದಿಲ್ಲ. ಆದರೆ, ಸರ್ಕಾರ ಪರ ಸಹಾಯಕ ಅಭಿಯೋಗ ನಿರ್ದೇಶಕರು ಸಾಕ್ಷಿ ವಿಚಾರಣೆಯನ್ನು ಕೈಕೊಂಡಿದ್ದು **ಪಿಡಬ್ಲ್ಯೂ–1 ರಿಂದ ಪಿಡಬ್ಲ್ಯೂ–2** ಇವರು ನೀಡಿದ ಹೇಳಿಕೆಯು ಕೂಡ ಸದರ ಮಿನಿಲಾರಿ ವಾಹನ ಮತ್ತು ಮುದ್ದೆ ಮ್ಹಾಲನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ಹಾಜರಾಗಿದ್ದು ಇರುವದಿಲ್ಲ. ಇದರಿಂದ ಅವರ ಪರವಾಗಿ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿರುತ್ತಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009(I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ಇದು ದಿನಾಂಕ: 05–12–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 8/2007–08, ದಿನಾಂಕ: 05–12–2007 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ಜಾತಿಯ ನಗಗಳು 44=3.941 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ಮತ್ತು ಅದರಲ್ಲಿದ್ದ ಸಾಗ ಜಾತಿಯ ನಗಗಳು 44=3.941 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA–30/7451 |
| 2) | ಇಂಜಿನ್ ನಂಬರ | : | 497D22DTOZ39951 |
| 3) | ಚಾಸಿ ನಂಬರ | : | 416403ETZ118488 |
| 4) | ವಾಹನದ ಮಾದರಿ | : | ಟಾಟಾ ಮಿನಿಲಾರಿ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:14–11–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**(Certified Copy)**

**P.R. 869**

**SC-05**

**ಟಿ. ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ.

**ಅಧಿಸೂಚನೆ**

**ಸಂಖ್ಯೆ : ಬಿ3:ಅ.ಮೊ.ವಾಹನ:ಪ್ರಕಟಣೆ: ವಿವ : 37 : 14–15, ದಿನಾಂಕ : 13–11–2014.**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯನ್ನು ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ (71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1. | ಮಾರುತಿ ಓಮಿನಿ– ಕೆಎ–02–ಬಿ–4915 | ಆನಂದಪುರಂ ವಲಯದ ಅ.ಮೊ. ಸಂಖ್ಯೆ : 22/14–15, ದಿನಾಂಕ : 05–09–2014 | F8BIN2258432 | ST911N518313 |
| 2. | ಹಿರೋಹೊಂಡಾ ಸ್ಪೆಂಡರ್ ಬೈಕ್ ಕೆಎ–15–ಕ್ಯೂ–1037 | ಶಿರಾಳಕೊಪ್ಪ ವಲಯದ ಅ.ಮೊ. ಸಂಖ್ಯೆ : 18/14–15, ದಿನಾಂಕ: 22–09–2014 | HA10EAA9D78283 | MBLHA10EEA9D10476 |
| 3. | ಹೀರೋಹೊಂಡಾ ಬೈಕ್ ಜಿಎ–07–ಎ–3820 | ಶಿರಾಳಕೊಪ್ಪ ವಲಯದ ಅ.ಮೊ. ಸಂಖ್ಯೆ : 22/14–15, ದಿನಾಂಕ : 05–10–2014 | Not Visible | F2R02J60000932 |
| 4. | ಯಮಹಾ ಕ್ರೈಕ್ಸ್ ಬೈಕ್ ಕೆಎ–16–ಕೆ–1183 | ಅದೇ | STM000191 | 01GSTMOOO191 |
| 5. | ಟಾಟಾ 1109–ಲಾರಿ ಕೆ–17–ಬಿ–7937 | ಆನವಟ್ಟಿ ವಲಯದ ಅ.ಮೊ.ಸಂಖ್ಯೆ : 28/14–15, ದಿನಾಂಕ : 09–10–2014 | 497TC72DDWY820814 | MAT457403D7D12815 |
| 6. | ಹಿರೋ ಸ್ಪೆಂಡರ್ ಬೈಕ್ ಕೆಎ–15–ಯು–0517 | ಅದೇ | 153797CMGBGR188 | MBLHA10ASDHD59326 |
| 7. | ಡಿಸ್ಕವರಿ ಬೈಕ್ ಕೆಎ–15–ಎಸ್–5427 | ಅದೇ | JBZWBK51800 | MDZA14AZ3DW17352 |
| 8. | ಹೀರೋಹೊಂಡಾ ಬೈಕ್ ಕೆಎ–15–ಇ–2345 | ಅಂಬ್ಲಿಗೊಳ ವಲಯದ ಅ.ಮೊ.ಸಂಖ್ಯೆ : 33/14–15, ದಿನಾಂಕ : 12–10–2014 | Not Visible | Not Visible |
| 9. | ಮಾರುತಿ 800 ಕಾರ್ ಕೆಎ–25–ಎಂ–9236 | ಶಿರಾಳಕೊಪ್ಪ ವಲಯದ ಅ.ಮೊ.ಸಂಖ್ಯೆ : 26/14–15, ದಿನಾಂಕ : 08–11–2014 | F8BIN2368158 | SB308IN1700029 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**P.R. 870** **ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,**

**SC-25** ಸಾಗರ ವಿಭಾಗ, ಸಾಗರ.

## ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ಕಛೇರಿ ಎಲ್.ವಿ.ಓ.–110, ಬೆಂಗಳೂರು, ಇವರ ನಡವಳಿಗಳು

**ಕ್ರಮ ಸಂಖ್ಯೆ : ಎಲ್.ವಿ.ಓ.–110, ಬೆಂಗಳೂರು ದಿನಾಂಕ : 15–11–2014.**

ಪ್ರಸ್ತುತ : ಶ್ರೀಮತಿ ಕೆ. ಯಶೋಧ,
ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ.–110, ಬೆಂಗಳೂರು.

ಖರೀದಿದಾರರ ಹೆಸರು : ಮೆ: ಶೇಷಸಾಯಿ ಇಂಟೀರಿಯರ್ಸ್, ನಂ. 107,
(ಓಲ್ಡ್ ನಂ. 88) ಎನ್.ಆರ್. ರಸ್ತೆ, ಬೆಂಗಳೂರು–2 ಟಿನ್ 29830071190

ಮಾರಾಟಗಾರರು : ಮೆ: ಡೀಲಕ್ಸ್ ರಿಕ್ಲೈನಿಂಗ್ (ಇಂಡಿಯಾ), ಪ್ರೈ. ಲಿ., ಪ್ಲಾಟ್ ನಂ. 10, ಪಿ.ಐ.ಡಿ.ಸಿ.ಓ.,
ಪಾಲಘರ್ (ವೆಸ್ಟ್), ಡಿಸ್ಟ್ರಿಕ್ಟ್–ಥಾನೆ– 401404 ಮಹಾರಾಷ್ಟ್ರ, ಟಿನ್ 274102955310.

ಈ ಕಛೇರಿ ಕರದಾತರಾದ ಮೆ: ಶೇಷಸಾಯಿ ಇಂಟೀರಿಯರ್ಸ್, ಟಿನ್ 29830071190, ನಂ. 107, ಎನ್.ಆರ್. ರಸ್ತೆ ಬೆಂಗಳೂರು–2 ಇವರು ಮೆ: ಡೀಲಕ್ಸ್ ರಿಕ್ಲೈನಿಂಗ್ (ಇಂಡಿಯಾ) ಪ್ರೈ.ಲಿ., ಪ್ಲಾಟ್ ನಂ. 10, ಪಿ.ಐ.ಡಿ.ಸಿ.ಓ., ಪಾಲಘರ್ (ವೆಸ್ಟ್), ಡಿಸ್ಟ್ರಿಕ್ಟ್–ಥಾನೆ–401404 ಮಹಾರಾಷ್ಟ್ರ ಇಲ್ಲಿಂದ 'ಸಿ' ನಮೂನೆ ನಂ. ಕೆಎ–ಸಿ 01 0394444, ದಿನಾಂಕ : 11–09–2008ರಲ್ಲಿ ದಿನಾಂಕ : 10–04–2008 ರಿಂದ 26–06–2008ರ ಅವಧಿಯಲ್ಲಿ ಒಳಾಂಗಣ ವಿನ್ಯಾಸಕ್ಕೆ ಸಂಬಂಧಿಸಿದ ಬೋರ್ಡ್ 'ಸಿ' ನಮೂನೆ ಮೇರೆಗೆ ರೂ. 20,27,303–00 ಖರೀದಿಸಿರುತ್ತಾರೆ.

ಈ ಮಧ್ಯೆ ಮಾರಾಟಗಾರರಾದ ಮೆ: ಶೇಷಸಾಯಿ ಇಂಟೀರಿಯರ್ಸ್, ಬೆಂಗಳೂರು ಇವರು ಮೆ: ಡೀಲಕ್ಸ್ ರಿಕ್ಲೈನಿಂಗ್ (ಇಂಡಿಯಾ) ಪ್ರೈ. ಲಿ., ಥಾನೆ, ಮಹಾರಾಷ್ಟ್ರ ಇವರಿಗೆ ನೀಡಿದ 'ಸಿ' ನಮೂನೆ ನಂ. ಕೆಎ–ಸಿ 01 0394444, ದಿನಾಂಕ : 11–09–2008 ರ ರೂ. 20,27,303–00 ಕಾರಣಾಂತರದಿಂದ ಕಳೆದುಹೋಗಿರುತ್ತದೆಂದು ದಿನಾಂಕ : 27–02–2013ರಲ್ಲಿ ಒಂದು ಪ್ರಮಾಣ ಪತ್ರವನ್ನು ಪೊಲೀಸ್ ಸ್ಟೇಷನ್, ಪಾಲಘರ್ ಮಹಾರಾಷ್ಟ್ರ ಇಲ್ಲಿಗೆ ದಿನಾಂಕ : 11–03–2013ರಂದು ಕಂಪ್ಲೇಂಟ್ ನೀಡುವುದಲ್ಲದೆ, ದಿನಾಂಕ : 18–11–2013ರಂದು ಪತ್ರಿಕಾ ಪ್ರಕಟಣೆ ನೀಡಿರುತ್ತಾರೆ. ಹಾಗೆಯೇ ಈ ಕಛೇರಿಯ ಕರದಾತರಾದ ಮೆ: ಶೇಷಸಾಯಿ ಇಂಟೀರಿಯರ್ಸ್, ಬೆಂಗಳೂರು ಟಿನ್ 29830071190 ದಿನಾಂಕ : 06–11–2014ರಂದು ಈ ಕಛೇರಿಗೆ ಮನವಿ ಸಲ್ಲಿಸಿ ಸದರಿ 'ಸಿ' ನಮೂನೆ ನಂ. ಕೆಎ–ಸಿ 01 0394444, ದಿನಾಂಕ : 11–09–2008ಯನ್ನು ರದ್ದು ಪಡಿಸಲು ಕೋರಿರುವುಲ್ಲದೆ ಬೇರೆ 'ಸಿ' ನಮೂನೆ ನೀಡಲು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ವಸ್ತುಸ್ಥಿತಿ ವಿಷಯವನ್ನು ಪರಿಶೀಲಿಸಿ ಕ.ಮೌ.ತೆ. ಕಾಯ್ದೆಗೆ ಒಳಪಟ್ಟಂತೆ ಕರದಾತರಾದ ಮೆ: ಶೇಷಸಾಯಿ ಇಂಟೀರಿಯರ್ಸ್, ಬೆಂಗಳೂರು ಇವರು ನೀಡಿರುವ 'ಸಿ' ನಮೂನೆ ನಂ. ಕೆಎ–ಸಿ 01 0394444, ದಿನಾಂಕ : 11–09–2008 ಅನ್ನು ರದ್ದುಪಡಿಸಲು ಆದೇಶ ಹೊರಡಿಸಿದೆ.

ಸ್ಥಳ : ಬೆಂಗಳೂರು,

ದಿನಾಂಕ : 15–11–2014. **ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು,**

**P.R. 874** ಎಲ್.ವಿ.ಓ–110, ಚಾಮರಾಜಪೇಟೆ, ಬೆಂಗಳೂರು.

**SC-10**

## ಪೊಲೀಸ್ ಆಯುಕ್ತರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ : 03/ಅಸೂ/ಡಿಸಿಪಿ ಸಂ(ಪ)/2014, ಬೆಂಗಳೂರು, ದಿನಾಂಕ : 15ನೇ ಅಕ್ಟೋಬರ್ 2014.**

ಬೆಂಗಳೂರು ನಗರ–ಕೆಂಗೇರಿ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ರಸ್ತೆಗಳು ಕಿರಿದಾಗಿದ್ದು ದ್ವಿಮುಖ ಸಂಚಾರ ವ್ಯವಸ್ಥೆಯನ್ನು ಹೊಂದಿ, ದಿನದ ಬಹುತೇಕ ವೇಳೆ ಅತ್ಯಧಿಕ ಸಂಚಾರ ದಟ್ಟಣೆ ಹಾಗೂ ಹೆಚ್ಚಿನ ಜನದಟ್ಟಣೆಯಿಂದ ಕೂಡಿರುತ್ತವೆ. ಅಲ್ಲದೆ ವಾಹನಗಳು ರಸ್ತೆಯಲ್ಲಿ ಎಲ್ಲೆಂದರಲ್ಲಿ ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡಿ ಸುಗಮ ಸಂಚಾರಕ್ಕೆ ಅಡಚಣೆಯುಂಟಾಗುತ್ತಿರುವ ಜೊತೆಗೆ ಸಂಚಾರ ಸ್ಥಗಿತ ಹಾಗೂ ಅಪಘಾತಗಳಿಗೂ ಕಾರಣವಾಗುತ್ತಿದೆ. ಸಾರ್ವಜನಿಕ ಹಿತದೃಷ್ಟಿ, ಅಪಘಾತಗಳ ನಿಯಂತ್ರಣ ಹಾಗೂ ವಾಹನಗಳ ಸುಗಮ ಸಂಚಾರದ ಸಲುವಾಗಿ ಈ ರಸ್ತೆಗಳ ಪೈಕಿ ಕೆಲವು ರಸ್ತೆಗಳಲ್ಲಿ ರಸ್ತೆಯ ಒಂದು ಬದಿಯಲ್ಲಿ ಹಾಗೂ ಹಲವು ರಸ್ತೆಗಳಲ್ಲಿ ರಸ್ತೆಯ ಎರಡೂ ಬದಿಗಳಲ್ಲೂ ವಾಹನಗಳ ನಿಲುಗಡೆ ನಿಷೇಧಿಸುವುದು ಹಾಗೂ ಕೆಲವು ರಸ್ತೆಗಳಲ್ಲಿ ಭಾರೀ ವಾಹನಗಳ ಪ್ರವೇಶ ನಿಷೇಧ ಮತ್ತು ಶಬ್ಧ ಮಾಡುವುದನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಎನ್. ರೆಡ್ಡಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಕೆಂಗೇರಿ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ವಾಹನಗಳ ನಿಲುಗಡೆ ಹಾಗೂ ನಿಷೇಧ ಮತ್ತು ಶಬ್ಧ ನಿಷೇಧ ಸಂಬಂಧ ಈ ಕೆಳಕಂಡಂತೆ ಮಾರ್ಪಾಡು ಮಾಡಿ ಆದೇಶಿಸಿರುತ್ತೇನೆ.

| ರಸ್ತೆಯ ಹೆಸರು | ಇಂದ | ವರೆಗೆ | ಅಧಿಸೂಚನೆಯ ವಿವರ |
|---|---|---|---|
| ಪಟ್ಟಣಗೆರೆ ಮುಖ್ಯ ರಸ್ತೆ | ಮೈಸೂರು ರಸ್ತೆ ಕ್ರಾಸ್‌ನಿಂದ | ಮೈಲಸಂದ್ರ ಗ್ಲೋಬಲ್ ವಿಲೇಜ್ ವರೆಗೆ | ರಸ್ತೆಯ ಎರಡೂ ಬದಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ರಾಜರಾಜೇಶ್ವರಿ ನಗರ ಡಬಲ್ ರಸ್ತೆ | ಅರುಣಾಚಲಂ ರಸ್ತೆ ಜಂಕ್ಷನ್‌ನಿಂದ | ಶ್ರೀನಿವಾಸಪುರ ಮುಖ್ಯ ರಸ್ತೆ ಜಂಕ್ಷನ್‌ವರೆಗೆ | ರಸ್ತೆಯ ಎರಡೂ ಬದಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ರಾಜರಾಜೇಶ್ವರಿ ನಗರ ಮುಖ್ಯ ರಸ್ತೆ (ನೆಹರೂ ರಸ್ತೆ) | ಕನಕದಾಸ ವೃತ್ತದಿಂದ | ವಿಷ್ಣುವರ್ಧನ ಮುಖ್ಯ ರಸ್ತೆ (ಚೆನ್ನಸಂದ್ರ ವೃತ್ತದವರೆಗೆ) | ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ರಾಜರಾಜೇಶ್ವರಿ ನಗರ ಮುಖ್ಯ ರಸ್ತೆ (ನೆಹರೂ ರಸ್ತೆ) | ಹಳೇ ಆಂಧ್ರ ಬ್ಯಾಂಕ್‌ನಿಂದ | ಕನಕದಾಸ ವೃತ್ತದವರೆಗೆ | ಅದಲು ಬದಲು ಪಾರ್ಕಿಂಗ್ ವ್ಯವಸ್ಥೆಗೆ ಆದೇಶಿಸಲಾಗಿದೆ. |
| ಐಡಿಯಲ್ ಹೋಮ್ಸ್ 1ನೇ 'ಎ' ಕೆಂಚೇನಹಳ್ಳಿ ಕ್ರಾಸ್ | 1ನೇ ಕ್ರಾಸ್ ನಿಂದ | 21ನೇ ಕ್ರಾಸ್‌ವರೆಗೆ | ಶಬ್ಧ ಮಾಡುವುದನ್ನು ನಿಷೇಧಿಸಿದೆ (No Horn Zone) |
| ಐಡಿಯಲ್ ಹೋಮ್ಸ್ 1ನೇ 'ಎ' ಕೆಂಚೇನಹಳ್ಳಿ ಕ್ರಾಸ್ | 1ನೇ ಕ್ರಾಸ್ ನಿಂದ | 21ನೇ ಕ್ರಾಸ್‌ವರೆಗೆ | ಭಾರೀ ವಾಹನಗಳ ಪ್ರವೇಶವನ್ನು ನಿಷೇಧಿಸಿದೆ. (HTV Prohibited) |
| ರಾಜರಾಜೇಶ್ವರಿ ನಗರದ ನಿಮಿಷಾಂಭ ದೇವಸ್ಥಾನದ ಮುಂಭಾಗದ ರಸ್ತೆ | ನಿಮಿಷಾಂಬ ದೇವಸ್ಥಾನದಿಂದ | ಬಸವೇಶ್ವರ ವೃತ್ತದವರೆಗೆ | ರಸ್ತೆಗೆ ಎರಡೂ ಬದಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ಸಂಚಾರ ಮಾರ್ಪಾಡುಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು (ನಿಯಮಾನುಸಾರ) ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ : 15–10–2014 ರಿಂದ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ : 15ನೇ ಅಕ್ಟೋಬರ್, 2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**P.R. 871** **ಎಂ.ಎನ್. ರೆಡ್ಡಿ,**

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಒಇ 469 ಪೊಸಿಪ 2014, ಬೆಂಗಳೂರು, ದಿನಾಂಕ : 15–11–2014.**

ಡಿವೈಎಸ್‌ಪಿ (ಬೆರಳು ಮುದ್ರೆ ಘಟಕ)ರವರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01–01–2014ರಲ್ಲಿದ್ದಂತೆ ತಯಾರಿಸಿ ಇದರೊಂದಿಗಿರುವ ಅನುಬಂಧದಲ್ಲಿ ಲಗತ್ತಿಸಲಾಗಿದೆ.

ಈ ಪಟ್ಟಿಯಲ್ಲಿ ನಮೂದಿಸಿದ ಅಧಿಕಾರಿಗಳ ಜೇಷ್ಠತೆ : ಸೇವಾ ವಿವರಗಳ ಕುರಿತಂತೆ ಯಾವುದಾದರೂ ಆಕ್ಷೇಪಣೆ ಅಥವಾ ಸಲಹೆಗಳೇನಾದರೂ ಇದ್ದಲ್ಲಿ ಅವುಗಳನ್ನು ಲಿಖಿತವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ವಿಧಾನಸೌಧ, ಬೆಂಗಳೂರು–560001ರವರಿಗೆ ಈ ಅಧಿಸೂಚನೆ ಪ್ರಕಟವಾದ 30 ದಿನಗಳೊಳಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ದಿನಾಂಕ : 01–01–2014ರಂದು ಇದ್ದಂತೆ ಡಿವೈಎಸ್‌ಪಿ (ಬೆರಳು ಮುದ್ರೆ ಘಟಕ) ರವರುಗಳ ಕರಡು ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಡಿವೈಎಸ್‌ಪಿ (ಬೆರಳು ಮುದ್ರೆ ಘಟಕ) ಹುದ್ದೆಗೆ ಮುಂಬಡ್ತಿ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1. | ಬಸವರಾಜ ಶಿರುಮಠ | 10–07–1955 | 01–08–1979 | 30–03–2011 | 21–04–2011 | – |
| 2. | ಹೆಚ್.ಎ. ಅಂಕೇಗೌಡ | 11–06–1953 | 01–08–1979 | 30–03–2011 | 29–04–2011 | ನಿವೃತ್ತ |
| 3. | ಬಿ.ಐ. ಪಾಟೀಲ | 27–11–1952 | 01–08–1979 | 17–01–2012 | 30–03–2012 | ನಿವೃತ್ತ |
| 4. | ಎಸ್.ಬಿ. ನವಲಗುಂದ | 01–06–1952 | 01–08–1979 | 17–01–2012 | 21–01–2012 | ನಿವೃತ್ತ |
| 5. | ಹರಿಶ್ಚಂದ್ರ ಹೆಜಮಾಡಿ | 28–12–1954 | 10–08–1979 | 22–05–2012 | 03–06–2012 | – |

**ಜೆ.ಡಿ. ಮಧುಚಂದ್ರ ತೇಜಸ್ವಿ**

**P.R. 872** ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಆಕುಕ 46 ಪಿಐಎಂ 2014, ಬೆಂಗಳೂರು, ದಿನಾಂಕ : 11–11–2014.**

ಆಯುಷ್ ಇಲಾಖೆಯಲ್ಲಿರುವ ಹಿರಿಯ ವೈದ್ಯಾಧಿಕಾರಿ (ಯುನಾನಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01–01–2014ರಲ್ಲಿದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 46 ಪಿಐಎಂ 2014, ದಿನಾಂಕ : 29–01–2014 ರಂದು ಪ್ರಕಟಿಸಿ, ಬಾಧಿತರಿಂದ ಆಕ್ಷೇಪಣೇಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗಾಗಿ ಸಲ್ಲಿಸುವಂತೆ ಆಹ್ವಾನಿಸಲಾಗಿತ್ತು. ಆದರೆ ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ.

ಆದ್ದರಿಂದ ಹಿರಿಯ ವೈದ್ಯಾಧಿಕಾರಿ (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01-01-2014 ರಲ್ಲಿದ್ದಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇರುವಂತೆ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾ.ವೈ.ಪ. ಮತ್ತು ಸಮನ್ವಯ).

**ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 46 ಪಿಐಎಂ 2014, ದಿನಾಂಕ : 11-11-2014ಕ್ಕೆ ಅನುಬಂಧ**

**ದಿನಾಂಕ : 01-01-2014ರಲ್ಲಿದ್ದಂತೆ ಆಯುಷ್ ಇಲಾಖೆಯ ಹಿರಿಯ ವೈದ್ಯಾಧಿಕಾರಿ (ಯುನಾನಿ) ವೃಂದದವರ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಯವರ ಹೆಸರು | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಡಾ॥ ಎಸ್.ಟಿ.ಎ. ಖಾದ್ರಿ | ಮುಂಬಡ್ತಿ | 01-09-1959 | 24-07-1981 | 16-08-2005 | 16-08-2005 |
| 2. | ಡಾ॥ ಹಫೀಜ್ ಅಶ್ಫಾಕ್ ಅಹಮದ್ | ಮುಂಬಡ್ತಿ | 06-04-1956 | 27-07-1981 | 06-09-2005 | 06-09-2005 |
| 3. | ಡಾ॥ ಕೈಸರ್ ಫರ್ವೀನ್ | ಮುಂಬಡ್ತಿ | 25-12-1959 | 22-10-1986 | 20-08-2005 | 20-08-2005 |
| 4. | ಡಾ॥ ಯು. ಸನಾವುಲ್ಲಾ | ಮುಂಬಡ್ತಿ | 01-06-1958 | 28-10-1986 | 10-08-2005 | 10-08-2005 |

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾ.ವೈ.ಪ. ಮತ್ತು ಸಮನ್ವಯ).

**P.R. 873**

**SC-10**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಕಂಇ 51 ಎಲ್ಆರ್ಎಂ 2012, ಬೆಂಗಳೂರು, ದಿನಾಂಕ : 14-11-2014.**

ಶ್ರೀ ಬಸವೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ (ನಿ), ಮೈಸೂರು ಇವರಿಗೆ ಮೈಸೂರು ತಾಲ್ಲೂಕು, ವರುಣಾ ಹೋಬಳಿ, ವರುಣಾ ಗ್ರಾಮದ ಸರ್ವೆ ನಂ. 78/1 ಮತ್ತು ಇತರೆಗಳಲ್ಲಿ ಒಟ್ಟು 44-05 ಎಕರೆ ಜಮೀನನ್ನು ವಸತಿ ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಯವರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ : ಎಲ್ಆರ್ಎಫ್/ಎನ್ಪಿಎಲ್/05/2007-08 ದಿನಾಂಕ : 21-03-2009 ರನ್ವಯ ಅನುಮತಿ ನೀಡಲಾಗಿದೆ. ಸದರಿ ಅವಧಿಯು ದಿನಾಂಕ : 20-03-2011ಕ್ಕೆ ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ನಿಗದಿತ ಅವಧಿಯಲ್ಲಿ ಉದ್ದೇಶವನ್ನು ಪೂರೈಸಿಕೊಳ್ಳಲು ಉಂಟಾದ ಅನಿವಾರ್ಯ ಕಾರಣಗಳನ್ನು ಸರ್ಕಾರವು ಪರಿಶೀಲಿಸಿದ ನಂತರ ಅರ್ಜಿದಾರರ ಉದ್ದೇಶ ಪೂರೈಸಿಕೊಳ್ಳಲು ಕರ್ನಾಟಕ ಭೂ ಸುಧಾರಣೆ ನಿಯಮಗಳು 1947ರ ನಿಯಮ 38(ಡಿ)(4)(i) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 125 ಎಲ್ಆರ್ಎ 2012, ದಿನಾಂಕ : 19-08-2012 ರಂತೆ, ದಿನಾಂಕ : 21-03-2011 ರಿಂದ ಅನ್ವಯವಾಗುವಂತೆ 5 ವರ್ಷಗಳವರೆಗೆ ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ..ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಭೂ ಸುಧಾರಣೆ).

**P.R. 1018**

**SC-20**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಆಕುಕ 141 ಪಿಐಎಂ 2014, ಬೆಂಗಳೂರು, ದಿನಾಂಕ : 26-12-2014**

ಆಯುಷ್ ಇಲಾಖೆಯಲ್ಲಿರುವ ವೈದ್ಯಾಧಿಕಾರಿ (ಹೋಮಿಯೋಪತಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01-01-2014 ರಲ್ಲಿದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 141 ಪಿಐಎಂ 2014, ದಿನಾಂಕ : 10-09-2014 ರಂದು ಪ್ರಕಟಿಸಿ, ಬಾಧಿತರಿಂದ ಆಕ್ಷೇಪಣೆಗಳನ್ನು

ಆಹ್ವಾನಿಸಲಾಗಿತ್ತು. ಅದರಂತೆ ಬಾಧಿತರಿಂದ ನಿಗಧಿತ ಅವಧಿಯಲ್ಲಿ ಬಂದ ಆಕ್ಷೇಪಣೆಯನ್ನು ಪರಿಶೀಲಿಸಿ, ಪರಿಗಣಿಸಿ ವೈದ್ಯಾಧಿಕಾರಿ (ಹೋಮಿಯೋಪತಿ) ವೃಂದದ **ಅಂತಿಮ ಜೇಷ್ಠತಾ ಪಟ್ಟಿಯನ್ನು** ದಿನಾಂಕ : 01–01–2014 ರಲ್ಲಿದ್ದಂತೆ ಸಿದ್ಧಪಡಿಸಿ ಅನುಬಂಧದಲ್ಲಿರುವಂತೆ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ ಮತ್ತು ಸಮನ್ವಯ).

## ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 141 ಪಿಐಎಂ 2014, ದಿನಾಂಕ : 26–12–2014ಕ್ಕೆ ಅನುಬಂಧ
## ದಿನಾಂಕ : 01–01–2014 ರಲ್ಲಿರುವಂತೆ ಆಯುಷ್ ಇಲಾಖೆಯಲ್ಲಿರುವ ವೈದ್ಯಾಧಿಕಾರಿ (ಹೋಮಿಯೋಪತಿ) ವೃಂದದವರ ಅಂತಿಮ ಜೇಷ್ಠತಾ ಪಟ್ಟಿ

| ಕ್ರ. ಸಂ. | ವೈದ್ಯಾಧಿಕಾರಿ ಹೆಸರು | ನೇರ ನೇಮಕಾತಿ/ಗುತ್ತಿಗೆ ಆಧಾರದಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡವರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಡಾ॥ ಗಂಗನಾಳ ಎ.ಡಿ. | ನೇರ ನೇಮಕಾತಿ | 10–06–60 | 04–09–895 | 27–08–1997 | |
| 2. | ಡಾ॥ ಶಾಂತಲಾ ಎಸ್. | –"– | 12–06–68 | 01–09–95 | 27–08–1997 | |
| 3. | ಡಾ॥ ಬಿ.ವಿ. ರಜನಿ | –"– | 02–04–62 | 05–09–95 | 27–08–1997 | |
| 4. | ಡಾ॥ ಜಿ. ಮಹಾದೇವ | –"– | 03–05–61 | 11–09–95 | 27–08–1997 | |
| 5. | ಡಾ॥ ಸೈಯದ್ ಇಸ್ಮಾಯಿಲ್ ಅಬ್ದುಲ್ ರಜಾಕ್ | –"– | 21–09–71 | 12–08–98 | 12–08–98 | |
| 6. | ಡಾ॥ ಬಸವಣ್ಣಪ್ಪ ಆದಿ ಸಂಗಪ್ಪ | –"– | 19–06–71 | 13–08–98 | 13–08–98 | |
| 7. | ಡಾ॥ ಕೃಷ್ಣ ಶೃಂಗಾರ ತೋಟ | –"– | 21–11–68 | 12–08–98 | 12–08–98 | |
| 8. | ಡಾ॥ ಹೆಚ್. ವಿಶ್ವನಾಥ ಶೆಟ್ಟಿ | –"– | 01–10–71 | 15–08–98 | 15–08–98 | |
| 9. | ಡಾ॥ ಅಶ್ವಥನಾರಾಯಣ | –"– | 01–02–68 | 12–08–98 | 12–08–98 | |
| 10. | ಡಾ॥ ಪ್ರಸನ್ನ ಹೆಚ್.ಎಸ್. | ಗುತ್ತಿಗೆ ಆಧಾರದಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡವರು | 02–06–71 | 29–01–04 | 29–01–04 | |
| 11. | ಡಾ॥ ತಿಮ್ಮಾರೆಡ್ಡಿ ಸಂಜೀವರೆಡ್ಡಿ | –"– | 10–10–65 | 29–01–2004 | 29–01–04 | |
| 12. | ಡಾ॥ ಆನಂದ ಹನುಮಂತರಾವ್ ನಾಯಕ್ | –"– | 11–11–66 | 29–01–2004 | 29–01–04 | |
| 13. | ಡಾ॥ ಬೃಂದ ಎಸ್. | ನೇರನೇಮಕಾತಿ | 11–05–77 | 25–08–2004 | 25–08–04 | |
| 14. | ಡಾ॥ ಶ್ರೀದೇವಿ | –"– | 10–06–70 | 25–08–2004 | 25–08–04 | |
| 15. | ಡಾ॥ ಅನಿಲ್ ಕುಮಾರ್ ಕಲಶೆಟ್ಟಿ | –"– | 30–07–77 | 27–08–2004 | 27–08–04 | |
| 16. | ಡಾ॥ ಶಿವಪ್ಪ ಬಸಪ್ಪ ಜನಗೌಡ | –"– | 20–03–72 | 22–08–2004 | 22–08–04 | |
| 17. | ಡಾ॥ ಪ್ರೇಮಾ ರಾಥೋಡ್ | –"– | 08–11–77 | 27–08–2004 | 27–08–04 | |
| 18. | ಡಾ॥ ಸತೀಶ್ ಭೀಮಶಂಕರ ಜಮೇದಾರ್ | ನೇರ ನೇಮಕಾತಿ | 22–07–75 | 22–08–2004 | 22–08–04 | |
| 19. | ಡಾ॥ ವಿಮಲಾ ಎಸ್ | –"– | 03–07–76 | 06–09–2004 | 06–09–04 | ರಾ.ಉ.ನ್ಯಾ. ರಿಟ್ ಅರ್ಜಿ ಸಂಖ್ಯೆ : 64508/2010 (ಎಸ್.ಕೆ.ಎಟಿ) ರಲ್ಲಿ ನೀಡಿದ ಆದೇಶದಂತೆ ಪರಿಷ್ಕೃತ ಆಯ್ಕೆ ಪಟ್ಟಿ ತಯಾರಿಸಿದ್ದರಿಂದ, |

| 1 | 2 | 3 | 4 | 5 | 6 | 7 |
|---|---|---|---|---|---|---|
| | | | | | | ಡಾ॥ ವಿಮಲಾ ಎಸ್. ಇವರು ನೇಮಕಾತಿಯಿಂದ ಹೊರ ಬಂದಿದ್ದರಿಂದ ಇವರ ನೇಮಕಾತಿಯು ಅನೂರ್ಜಿತವೆಂದು ಸ.ಆ.ಸಂ. ಆಕುಕ, ದಿನಾಂಕ : 31–05–2014ರ ಅಪರಾಹ್ನದಂದು ಕರ್ತವ್ಯದಿಂದ ಬಿಡುಗಡೆಗೊಳಿಸಿದೆ. |
| 20. | ಡಾ॥ ಅರುಣ ಆರ್. ಅಸೂಟಿ | ಗುತ್ತಿಗೆ ಆಧಾರದಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡವರು | 21–02–75 | 02–02–2006 | 02–02–06 | |
| 21. | ಡಾ॥ ಚನ್ನಯ್ಯ ಬಸಯ್ಯಕಂಬಳಿಮಠ | –"– | 21–07–73 | 02–02–2006 | 02–02–206 | |
| 22. | ಡಾ॥ ಹೆಚ್.ಜೆ. ಸೋಮಶೇಖರ್ | –"– | 10–06–73 | 02–02–2006 | 02–02–06 | |
| 23. | ಡಾ॥ ಪುಷ್ಪ ಸಂಗೋಳಗಿ | –"– | 13–09–75 | 02–02–2006 | 02–02–06 | |
| 24. | ಡಾ॥ ರಾಜಶೇಖರ ಚನ್ನಬಸಪ್ಪ ಹೊಸಮನಿ | –"– | 10–04–72 | 02–02–2006 | 02–02–06 | |
| 25. | ಡಾ॥ ಪ್ರಕಾಶ ಹೆಚ್ ರಜಪೂರ್ | –"– | 15–07–75 | 02–02–2006 | 02–02–06 | |
| 26. | ಡಾ॥ ಅರುಂಧತಿ ಕುಲಕರ್ಣಿ | –"– | 29–11–72 | 02–02–2006 | 02–02–06 | |
| 27. | ಡಾ॥ ರೇಣುಕಾ ಜೆ. ಕಟ್ಟಿಮನಿ | –"– | 29–07–75 | 02–02–2006 | 02–02–06 | |
| 28. | ಡಾ॥ ರಿಯಾಜ್ ಅಹಮ್ಮದ್ ಹುಸೇನ್ ಸಾಬಾ ಸುಲ್ಲದ್ | –"– | 01–06–73 | 02–02–2006 | 02–02–06 | |
| 29. | ಡಾ॥ ಸಂಜೀವ ಮಾಧವರಾವ್ ನರಪ್ಪನವರ್ | –"– | 25–12–73 | 02–02–2006 | 02–02–06 | |
| 30. | ಡಾ॥ ಗಿರೀಶ್ ಬಾಳಾಸಾಹೇಬ್ ಮಾಯಣ್ಣನವರ್ | –"– | 05–12–76 | 02–02–2006 | 02–02–06 | |
| 31. | ಡಾ॥ ಆರ್.ಬಿ. ದೊಡ್ಡಮನಿ | –"– | 01–10–74 | 02–02–2006 | 02–02–06 | |
| 32. | ಡಾ॥ ಅಬ್ದುಲ್ ರಜಾಕ್ ನಬೀಸಾಬ್ ಬಡೇಗಾರ್ | –"– | 01–06–73 | 06–03–2008 | 06–03–08 | |
| 33. | ಡಾ॥ ಎಸ್.ಎಸ್. ರಾಮದುರ್ಗ | –"– | 01–06–69 | 06–03–2008 | 06–03–08 | |
| 34. | ಡಾ॥ ಗಿರೀಶ್ ಪಶುಪತಿ ಮಠ | –"– | 28–09–77 | 06–03–2008 | 06–03–08 | |
| 35. | ಡಾ॥ ಸಂಜಯ ಕುಲಕರ್ಣಿ | –"– | 05–08–76 | 06–03–2008 | 06–03–08 | |
| 36. | ಡಾ॥ ರೂಪ ಐ. ರೆಡ್ಡಿ | –"– | 29–03–77 | 06–03–2008 | 06–03–08 | |
| 37. | ಡಾ॥ ರಮೇಶ್‌ಚಂದ್ರ ಆರ್.ಜಿ. | ಗುತ್ತಿಗೆ ಆಧಾರದಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡವರು | 04–04–76 | 06–03–2008 | 06–03–08 | |
| 38. | ಡಾ॥ ದೀಪಾ ರಾಥೋಡ್ | –"– | 28–02–79 | 15–05–2013 | 15–05–2013 | |
| 39. | ಡಾ॥ ಹನುಮಂತ ಕನಕಟಕರ | –"– | 03–04–74 | 15–05–2013 | 15–05–2013 | |
| 40. | ಡಾ॥ ಮೀರಾ ಎಸ್. ಜೋಷಿ | –"– | 21–07–79 | 15–05–2013 | 15–05–2013 | |
| 41. | ಡಾ॥ ಸೈಯದ್ ಇಫ್ತಿಕಾರ್ ಅಹಮ್ಮದ್ ವಜೀರ್ | –"– | 20–04–69 | 15–05–2013 | 15–05–2013 | |
| 42. | ಡಾ॥ ಕೆ.ಎಸ್. ಸರಸ್ವತಿ | –"– | 01–03–76 | 15–05–2013 | 15–05–2013 | |
| 43. | ಡಾ॥ ಉಮಾಪಾಟೀಲ್ | –"– | 07–07–76 | 15–05–2013 | 15–05–2013 | |

| 1 | 2 | 3 | 4 | 5 | 6 | 7 |
|---|---|---|---|---|---|---|
| 44. | ಡಾ॥ ಪ್ರಮೀಳಾದೇವಿ | –"– | 04–06–77 | 15–05–2013 | 15–05–2013 | |
| 45. | ಡಾ॥ ಸುರಹೊನ್ನಿ ದೇವರಾಜ್ ಅಶೋಕ್ | –"– | 17–03–74 | 15–05–2013 | 15–05–2013 | |
| 46. | ಡಾ॥ ಕವಿತಾ ವಿ. ಅಂಶಿ | –"– | 20–07–77 | 15–05–2013 | 15–05–2013 | |
| 47. | ಡಾ॥ ಕಾಂಚನಾ ಮಾಲಾ ಭೈರಶೆಟ್ಟಿ | –"– | 06–02–80 | 15–05–2013 | 15–05–2013 | |
| 48. | ಡಾ॥ ಅನ್ನಪೂರ್ಣ ಭಂಡಾರಿ | –"– | 03–11–70 | 15–05–2013 | 15–05–2013 | |

**P.R. 55**

**SC-50**

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ ಮತ್ತು ಸಮನ್ವಯ).

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–2, ಬೆಂಗಳೂರು

## ಪ್ರಕಟಣೆ

## ಸಂಖ್ಯೆ : ಸಕಾಆಬೆಂ–2/ಪಿಜಿಎ/ಸಿಆರ್–88/2014

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ಶ್ರೀಮತಿ ಹಸೀನ ಅಲಿಯಾಸ್ ಜಯಲಕ್ಷ್ಮಿ ಕೋಂ ಲೇಟ್ ಮಾಹಾಚಾರಿ, ನಂ. 44, 3ನೇ 'ಡಿ' ಕ್ರಾಸ್, ಕಲ್ಕೇರಿ ಮುಖ್ಯ ರಸ್ತೆ, ರಾಮಮೂರ್ತಿನಗರ, ಬೆಂಗಳೂರು–16.<br>2. ಶ್ರೀಮತಿ ಸುಶೀಲಮ್ಮ ಕೋಂ ಪವತಿ ಶ್ರೀ ಎಸ್.ಜೆ. ಮಾಯಾಚಾರಿ, ಆವಲಹಳ್ಳಿ, ವೀರ್ಗೋನಗರ ಅಂಚೆ, ಬೀದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು.<br>3. ಶ್ರೀಮತಿ ಕೋಮಲ–ಇವರ ಪರವಾಗಿ ಶ್ರೀ ಎಲ್.ಬಿ. ಪೂಜಾರಿ, ವಕೀಲರು, ಬಸವ ನಿಲಯ, ಪ್ಲಾಟ್ ನಂ. 79, ಪುರ್ತುರ್ಝಾಖದರಿ ದರ್ಗಾ ಹತ್ತಿರ, ಕೀರ್ತಿನಗರ, ಬಿಜಾಪುರ | ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ,<br>ನಂ. 16/1 ಮಿಲ್ಲರ್ಸ್ ಟ್ಯಾಂಕ್ ಬೆಡ್ ಏರಿಯಾ, ಬೆಂಗಳೂರು–52. |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿ 3 ಜನ ಅರ್ಜಿದಾರರಿದ್ದು ಪ್ರತಿವಾದಿಯವರು ಮೃತ ಎಸ್.ಜೆ. ಮಾಯಾಚಾರಿ, ಹಿರಿಯ ಸಹಾಯಕರು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದ ಚಿತ್ರದುರ್ಗ ಜಿಲ್ಲಾ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಇವರು ದಿನಾಂಕ : 30–07–12ರಲ್ಲಿ ನಿಧನ ಹೊಂದಿರುತ್ತಾರೆಂದು ತಿಳಿಸಿ, ಈ ಪ್ರಾಧಿಕಾರದಲ್ಲಿ ರೂ. 3,85,200/–ಗಳನ್ನು ಠೇವಣಿಗೊಳಿಸಿ ಸದರಿ ಮೊತ್ತವನ್ನು ದಿವಂಗತರ ಕುಟುಂಬ ವರ್ಗದವರೆಂದು ಮೇಲ್ಕಂಡ 3 ಜನರನ್ನು ಅರ್ಜಿದಾರರೆಂದು ತಿಳಿಸಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**P.R. 71**

**SC-5**

**ಕೆ.ಬಿ. ನಾಗರಾಜ್**
ಸಹಾಯಕ ಕಾರ್ಮಿಕ ಆಯುಕ್ತರು,
ಮತ್ತು ಉಪಧನ ನಿಯಂತ್ರಣಾಧಿಕಾರಿ,
ಬೆಂಗಳೂರು ವಿಭಾಗ–2, ಬೆಂಗಳೂರು.

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

## ಅಧಿಸೂಚನೆ

## ಸಂಖ್ಯೆ : ಕಸಂವಾಪ್ರ 29 ಕೆಎಂಯು 2011, ಬೆಂಗಳೂರು, ದಿನಾಂಕ : 30–12–2014

ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನೆಲೆಗಳು ಮತ್ತು ಅವಶೇಷಗಳು, ಅಧಿನಿಯಮ 1961ರ ಕಲಂ 4ರ ಉಪಕಲಂ (3)ರ ಅಡಿ (ಕರ್ನಾಟಕ ಅಧಿನಿಯಮ ಸಂಖ್ಯೆ : 7–1962) ಪ್ರದತ್ತವಾದ ಅಧಿಕಾರದಡಿ ಕರ್ನಾಟಕ ಸರ್ಕಾರವು ಜಂಬುನಾಥ ದೇವಸ್ಥಾನ,

ಜಂಬುನಾಥ ಹಳ್ಳಿ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಿ ಅಧಿಸೂಚನೆ ಸಂಖ್ಯೆ : ಐಟಿವೈ 13 ಕೆಎಂಯು 87, ದಿನಾಂಕ : 13 ಸೆಪ್ಟೆಂಬರ್ 1991ನ್ನು ಹೊರಡಿಸಿದ್ದು, ಇದು ದಿನಾಂಕ : 28 ಮೇ 1992ರ ಕರ್ನಾಟಕ ರಾಜ್ಯ ಪತ್ರದ ಭಾಗ IV–2ಸಿ (ii) ಪುಟ ಸಂಖ್ಯೆ : 1201ರಲ್ಲಿ ಪ್ರಕಟಣೆಗೊಂಡಿರುತ್ತದೆ.

ಸಿವಿಲ್ ಅಪೀಲು ನಂ. 4823/2013ರ ಮೇಲೆ ಭಾರತದ ಸರ್ವೋಚ್ಚ ನ್ಯಾಯಾಲಯವು (ಕೆ. ಗುರುಪ್ರಸಾದ್ ರಾವ್, ಅಪೀಲುದಾರರು ವಿರುದ್ಧ ಕರ್ನಾಟಕ ಸರ್ಕಾರ ಮತ್ತಿತರರು) ಈ ಕೆಳಕಂಡ ಆದೇಶ/ಡಿಕ್ರಿಯನ್ನು ಮಾಡಿರುತ್ತದೆ.

**ಆದೇಶದ ಪ್ರಮುಖ ಭಾಗಗಳು**

ಅಪೀಲು ಪುರಸ್ಕರಿಸಲಾಗಿದೆ. ಸಮಿತಿಯ ವರದಿಯನ್ನು ಅಂಗೀಕರಿಸಲಾಗಿದೆ ಮತ್ತು ರಾಜ್ಯ ಸರ್ಕಾರವು ಈ ವರದಿಯ ಭಾಗ Vರಲ್ಲಿನ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವಂತೆ ನಿರ್ದೇಶಿಸಲಾಗಿದೆ.

ಈ ವರದಿಯು "ಜಂಬುನಾಥ ದೇವಸ್ಥಾನದ ಮೇಲೆ ಗಣಿಗಾರಿಕೆ ಚಟುವಟಿಕೆಗೆ ಪ್ರಭಾವ" ಎಂಬ ವಿಷಯವನ್ನು ಆಧರಿಸಿದೆ.

**ಸಮಿತಿಯ ಶಿಫಾರಸ್ಸುಗಳು ಈ ಕೆಳಕಂಡಂತಿವೆ.**

1. ಕೋರ್ ಜೋನ್ : ದೇವಸ್ಥಾನ ಮತ್ತು ಪ್ರಚಲಿತ ಕಾನೂನು ಉಪಬಂಧದಡಿಯಲ್ಲಿನ ರಕ್ಷಿತ ಪ್ರದೇಶವು ಸೇರಿದ ಪ್ರದೇಶ ಮತ್ತು ಅಲ್ಲಿನ ಆಚೆಯಿಂದ ಎಲ್ಲಾ ದಿಕ್ಕುಗಳಲ್ಲೂ ಆವರಿಸಿರುವ 1.00 ಕಿ.ಮೀ. ದೂರದ ವ್ಯಾಪ್ತಿಯ ಪ್ರದೇಶ.
2. ಬಫರ್ ಜೋನ್ : ರಕ್ಷಿತ ಪ್ರದೇಶ ಮತ್ತು ಕೋರ್ ಜೋನ್‌ನಿಂದ ಆಚೆಯ 1.00 ಕಿ.ಮೀ. ದೂರದ ವ್ಯಾಪ್ತಿಯ ಮತ್ತು ಎಲ್ಲಾ ದಿಕ್ಕುಗಳಲ್ಲೂ ಆವರಿಸಿರುವ ಒಟ್ಟಾರೆ 2.00 ಕಿ.ಮೀ. ದೂರದ ಮಿತಿಯ ಪ್ರದೇಶ.

ಈ ಎಲ್ಲಾ ಅಂಶಗಳನ್ನು ಒಟ್ಟಾರೆ ಪರಿಗಣಿಸಿ, ಈ ಕಾರಣದಿಂದ, ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನೆಲೆಗಳು ಮತ್ತು ಅವಶೇಷಗಳು ಅಧಿನಿಯಮ, 1961ರ ಕಲಂ 19ರ ಉಪಕಲಂ (3)ರ ಅಡಿ (ಕರ್ನಾಟಕ ಅಧಿನಿಯಮ ಸಂಖ್ಯೆ : 7–1962) ಪ್ರದತ್ತವಾದ ಅಧಿಕಾರದನ್ವಯ ಜಂಬುನಾಥ ದೇವಸ್ಥಾನದ ಸುತ್ತಲಿನ 2.00 ಕಿ.ಮೀ. ವ್ಯಾಪ್ತಿಯ ಪ್ರದೇಶವು ಎರಡು ಜೋನುಗಳನ್ನು ಹೊಂದಲ್ಪಟ್ಟಿದೆ ಎಂದು ಘೋಷಿಸಲ್ಪಟ್ಟಿದೆ.

ಅವುಗಳೆಂದರೆ ಮೇಲೆ ವಿವರಿಸಿರುವ ಕೋರ್ ಜೋನ್ ಮತ್ತು ಬಫರ್ ಜೋನ್‌ಗಳು ಅನುಬಂಧ ಹಾಗೂ ಮ್ಯಾಪಿನಲ್ಲಿ ವಿವರಿಸಲ್ಪಟ್ಟಂತೆ ಇವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

(ಆಡಳಿತ ಕನ್ನಡ).

**ಪರಿವಿಡಿ**

**ಅಧಿಸೂಚನೆ ಸಂಖ್ಯೆ : ಕಸಂವಾಪ್ರ 29 ಕೆಎಂಯು 2011, ದಿನಾಂಕ : 30–12–2014**

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ರಕ್ಷಿತ ಪ್ರದೇಶದ ಹೆಸರು ಮತ್ತು ವ್ಯಾಪ್ತಿ | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು ಚಕ್ಕುಬಂದಿ | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬಳ್ಳಾರಿ | ಹೊಸಪೇಟೆ | ಜಂಬುನಾಥ ಹಳ್ಳಿ | ಜಂಬುನಾಥ ದೇವಸ್ಥಾನ (ರಾಜ್ಯ ಸಂರಕ್ಷಿತ) ಹಾಗೂ ಕಾನೂನು ಉಪಬಂಧಗಳಡಿ ರಕ್ಷಿಸಲ್ಪಟ್ಟಿರುವ ಪ್ರದೇಶ ಇವೆರಡು ಸೇರಿದಂತೆ | **ಕೋರ್ ಜೋನ್:** ಸ್ಮಾರಕದ ರಕ್ಷಿತ ಪ್ರದೇಶದ ಆಚೆಯ 1.00 ಕಿ.ಮೀ. ದೂರ ಮ್ಯಾಪಿನ ಪ್ರಕಾರ **ಬಫರ್ ಜೋನ್:** ಕೋರ್‌ಜೋನಿನ ಆಚೆಯ 1.00. ಕಿ.ಮೀ. ದೂರ ಮ್ಯಾಪಿನ ಪ್ರಕಾರ | ಸ.ಸಂ. 198, 9.00 ಎಕರೆ 12.00 ಗುಂಟೆ | ಸ.ಸಂ. 115 ಬಿ | ಮುಜರಾಯಿ ಇಲಾಖೆ | ಕ್ರಿ.ಶ. 1540 ರಲ್ಲಿ ನಿರ್ಮಾಣ ವಾಗಿರುವ ಒಂದು ಪುರಾತನ ಮತ್ತು ಐತಿಹಾಸಿಕ ದೇವಸ್ಥಾನ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

(ಆಡಳಿತ ಕನ್ನಡ).

## KANNADA, CULTURAL AND INFORMATION SECRETARIAT

### Notification

### No. KCIT 29 KMU 2011, Bengaluru, Dated: 30.12.2014.

In exercise of the powers conferred by sub-section (3) of section 4 of the Karnataka Ancient and Historical Monuments and Archaeological sites and Remains Act, 1961 (Karnataka Act No. 7 of 1962) Government of Karnataka issued the Notification No. ITY 13 KMU 87 dated 13th September 1991 declaring the Jambunatha temple, Jambunathnahalli, Hospete taluk, Ballary district as state protected monument which was published in Karnataka Gazette dated 28th May 1992, Part IV-2C (ii), Page no: 1201.

The Hon'ble Supreme court of India in its judgment dated: 01.07.2013 made the following order/decree of Civil Appeal No.4823 of 2013. (K.Guruprasad Rao, Appellant V / s State of Karnataka and others).

**Excerpts of the order:**

The appeal is allowed. The report of the committee is accepted and the State Government is directed to implement the recommendations contained in Part V thereof.

The report is based on "The impact of mining activities on the Jambunatha temple".

The Committee recommends as follows:

1. CORE ZONE: Comprising the temple along with area protected under legal provisions in vogue and the area further beyond it in all directions upto a distance of 1.00 km.
2. BUFFER ZONE: Comprising the area further beyond the CORE ZONE in all directions upto a distance of 2.00 km from the protected area and 1.00 km from the Core Zone.

Considering all these points together, in exercise of the powers conferred by sub-section (3) of section 19 of the Karnataka Ancient and Historical Monuments and Archeological Sites and Remains Act, 1961 (Karnataka Act Nm. 7 of 1962) the area surrounding the Jambunatha temple up to 2.00 km is declared to have consisted of two zones viz; CORE ZONE and BUFFER ZONE as detailed above and as specified in the schedule and the Map hereto.

By Order and in the name of Governor of Karnataka
**Manjunatha Patil**
Kannada, Cultural and Information Department
(Administrationa Kannada)

**SCHEDULE**

| Sl. No. | District | Taluk | Locality | Name & extent of the monument/ protected area | Plot to be included under protection | Area | Boundaries | Ownership | Remarks |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1. | Ballary | Hopete | Jambunatha halli | Jambunatha temple (State protected) along with the area protected under legal provision | **Core Zone:** 1.00 k.m. beyound the protected area of the monument, as per Map. **Buffer Zone:** 1.00 k.m. beyond core zone, as per Map. | Sy. No. 198 9.00 acre 12.00 cents | Sy. No. 115B | Muzrai Department | An ancient and historical temple built in 1540 CE. |

P.R. 68
SC-50

By Order and in the name of Governor of Karnataka
**Manjunath Patil**
Kannada, Cultural and Information Department
(Administration Kannada)

# DEPARTMENT OF COMMERCIAL TAXES

## PROCEEDINGS OF THE ASST.COMMISSIONER OF COMMERCIAL TAXES, LVO-260, MANGALURU

**DATED: 18.10.2014**

**PRESENT :** M. CHANDRAPPA

**Sub:** Loss of 7 F forms issued by M/s BASF India Limited, TIN 29760100280 to M/s.Shramik Krushi Udyog Ltd., Ahmednagar, Maharastra TIN: 27550298454- Reg

**Ref:** 1. Letter dated 25.04.2014 of M/s BASF India Ltd., Mangaluru TIN: 29760100280

2. Letter of JCCT (Adm.), DVO, Mangaluru dt: l5.05.2014

**Preamble :**

M/s BASF India Ltd., Katipalla, Mangaluru is a registered dealer borne on the files of this office bearing TIN: 29760100280. The dealer M/s BASF India Ltd., in his letter cited at (1) above has intimated that SEVEN *"F"* Forms issued on 23.1.2009 & 13.8.2009 bearing No's.

(1) 03H 612676 for Rs.33,96,939.80 dt: 23.01.2009

(2) 03H 612677 for Rs.23,520.00 dt: 23.01.2009

(3) 03H 612678 for Rs.1,74,000.00·dt: 23.01.2009

(4) 03H 612679 for Rs. 3,09,900.00 dt:23.01.2009

(5) 03H 644804 for Rs. 7,72,000.00 dt: 13.08.2009

(6) 03H 644805 for Rs.1,88,544.00 dt: 13.08.2009

(7) 03H 644806 for Rs.2,55,500.00 dt: 13.08.2009 which were issued to M/s Shramik Krushi Udyog Ltd., Ahmednagar, Maharastra were lost in the custody of purchasing dealer i.e.

M/s Shramik Krushi Udyog Ltd., Ahmednagar, Maharastra.

Accordingly, the purchasing Dealer M/s Shramik Krushi Udyog Ltd., Ahmednagar, Maharastra filed copy of police complaint lodged to the jurisdictional police officer, executed indemnity bond in Form "G" in favour of Government of Karnataka as laid down under Rule 12(2) and 12(9) of CST Act 1956 and also produced paper cutting for having published in local papers and requested this office to issue duplicate *"F"* Form and also to be treated the above lost seven "F" Forms as invalid. The divisional Joint Commissioner of Commercial Taxes (Adm.). DVO, Mangaluru vide his letter ref(2) above dated l5.05.2014 has directed to take up the required actions as prescribed under Rule.6(e)(i) & and 6(i) of the CST (Karnataka) Rules 19S7. Hence, this order :

**ORDER NO:ACCT.LVO-260/'F' FORMS/2014-15 DATED: 18.10.2014**

In view of the circumstances explained above, the said seven "F" Forms issued on 23.01.2009 & 13.08.2009 bearing No: bearing (1) 03H 612676 for Rs.33,96,939.80 dt: 23.01.2009 (2) 03H 612677 for Rs.23,S20.00 dt: 23.01.2009 (3) 03H 612678 for Rs.1,74,OOO.00 dt: 23.01.2009 (4) 03H 612679 for Rs. 3,09,900.00 dt:23.01.2009 (5) 03H 644804 for Rs.7,72,OOO.00 dt: 13.08.2009 (6) 03H 644805 for Rs.1,88,544.00 dt: 13.08.2009 (7) 03H 644806 for Rs.2,55,5OO.00 dt: 13.08.2009 were issued to Mis Shramik Krushi Udyog Ltd., Sangamner, Ahemadnagar by M/s BASF India Ltd., Mangaluru TIN:29760100280 is treated as invalid with immediate effect.

**M. CHANDRAPPA,**
Asst. Commissioner of Commercial Taxes,
Local VAT Office-260, Mangaluru.

**OFFICE OF THE ACCT,LVO-260, MANGALURU NOTIFICATION DATED 18.10.2014**

**Notified Authority Under Rules. 6(e) (1) of the CST (Karnataka) Rules 1957**

By virtue of the provisions of Rules .12(2) of the CST (R & T) Rules 1957, it is hereby notified for general information that the declarations in "F" forms shown below are declared to be lost in the custody of purchasing dealer and also to be invalid.

| Sl. No. | Number (including code No.) of declaration forms lost | Name & address of the dealer to whom declaration forms is/are issued by the department with date of F forms issued | Registration certificate No. of the dealer under CST Act 1956 | The address of the dealer to whom the declarations are sent | Date of issue of forms by the dealer | Whet her lost / stolen destroyed | Amount in Rs. |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | 03H 612676 | BASF India Ltd., Katipalla, M'luru | 29760100280 | Shramik Krushi Udyog Ltd., Sangamner, Ahemadnagar | 23.01.2009 | Lost | 33,96,939.80 |

